ಮಣಿಮುಕ್ತಾ ಪ್ರವಾಳ ರಜತ, ಅಯಃ ಕಾಂಸ್ಯ, ಖಂಡ, ಶರ್ಕರೆಗಳ ಚೌರ್ಯದಲ್ಲಿ ದ್ವಾದಶಾಹ ಕಣಾನ್ನಾಶನ ಮಾಡಬೇಕು ॥ ೪೭ ॥

ವಸ್ತ್ರ ಪಟ್ಟೆವಸ್ತ್ರ ಕಂಬಳಗಳು ಒಂದೆರಡುಗೊರಸುಳ್ಳ ಪ್ರಾಣಿಗಳ ಕೇಶಮಯವಾದವಸ್ತ್ರ ಪಕ್ಷಿ ಗಂಧೌಷಧಿ ರಜ್ಜುಗಳು ಇವುಗಳಚೌರ್ಯದಲ್ಲಿ ಮೂರುದಿನ ಪಯಃಪಾನವಂ ಮಾಡಿಕೊಂಡಿರಬೇಕು ॥ ೪೮

ಈವ್ರತಗಳಿಂದ ಚೌರ್ಯದಪಾಪವು ಅಗಂಮ್ಯಾಗಮನದಪಾಪಸಹ ಪೋಗುವದು. ॥ ೪೯ ॥

ಮಿತ್ರ, ಪುತ್ರರಸ್ತ್ರೀಯರಲ್ಲೂ, ಕುಮಾರಿಯಲ್ಲೂ ಪಿತೃಭಗಿನೀ, ಕನ್ಯಾ ಮಾತೃಭಗಿನಿ ಕನ್ಯಾಮಾತುಲ ಪತ್ನಿಯರಲ್ಲೂ ಸಂಗವಾದರೆ ಚಾಂದ್ರಾಯಣವಂ ಮಾಡಬೇಕು

ಈಸ್ತ್ರೀಯರನ್ನು ಮದುವೆ ಮಾಡಿಕೊಂಡವರು ಜ್ಞಾತಿಸ್ತ್ರೀ ಸಂಗವಂ ಮಾಡಿದವರು ಸಹ ಪತಿತರೆನಿಸುವರು. ॥ ೫೦ ॥

ಪಶ್ವಾದಿಗಳಲ್ಲೂ, ಮುಟ್ಟಾದವರಲ್ಲೂ, ಜಲದಲ್ಲೂ, ರೇತಸ್ಸೇಕವಂ ಮಾಡಿದವನು ಸಾಂತಪನ ಕೃಛ್ರವಂ ಮಾಡಬೇಕು. ॥ ೫೧ ॥

ಮೈಥುನಂಚಸಮಾಲೋಕ್ಯಪುಂಸಿಯೋಷಿತಿವಾದ್ವಿಜಃ ॥ ಗೋ
ದಾನೇಪ್ಸುದಿವಾಚೈವ ಸವಾಸಾಃಸ್ನಾನಮಾಚರೇತ್ ॥ ೫೪ ॥

ಚಾಂಡಾಲಾಂತ್ಯಸ್ತ್ರಿಯೋಗತ್ವಾಭುಕ್ತ್ವಾಚಪ್ರತಿಗೃಹ್ಯಚ
ಪತತ್ಯಜ್ಞಾನತೋವಿಪ್ರೋ ಜ್ಞಾನಾತ್ಸಾಮ್ಯಂತುಗಚ್ಛತಿ ॥

ವಿಪ್ರದುಷ್ಟಾಂಸ್ತ್ರಿಯಂಭರ್ತಾ ನಿರುಂಧ್ಯಾದೇಕವೇಶ್ಮನಿ ॥ ಯ
ತ್ಪುಂಸಃಪರದಾರೇಷು ತಚ್ಚೈನಾಂಚಾರಯೇದ್ವ್ರತಂ ॥ ೫೬

ಸಾಚೇತ್ಪುನಃಪ್ರದುಷ್ಯೇತ್ತು ಸದೃಶೇನೋಪಮಂತ್ರಿತಂ ॥ ಕೃಚ್ಛ್ರಂ
ಚಾದ್ರಾಯಣಂಚೈವ ತತ್ತಸ್ಯಾಃಪಾವನಂ ಸ್ಮೃತಂ ॥ ೫೭
ಯಃಕರೋತ್ಯೇಕರಾತ್ರೇಣ ವೃಷಲೀಸೇವನಾಂದ್ವಿಜಃ ॥ ತದೇಕ
ಭುಕ್ ಜಪನಿತ್ಯಂ ತ್ರಿಭಿರ್ವರ್ಷೈರ್ವ್ಯಪೋಹತಿ ॥ ೫೮ ॥

ಏಷಾಪಾಪಕೃತಾ ಮುಕ್ತಾ ಚತುರ್ಣಾಮಪಿ ನಿಷ್ಕೃತಿಃ॥

ಮೈಥುನ ಸಮಯದಲ್ಲಿ ಸ್ತ್ರೀಯು ಸ್ನಾನಗಳೀ, ಪುರುಷ ನಸ್ನಾನಗಳಿ ನೋಡಿದರು, ಗೋವೃಷಭವನ್ನೇರಿದರು, ಆಹಗಲಿನಲ್ಲಿ ಸಚೇಲಸ್ನಾನವಂ ಮಾಡಬೇಕು. ॥ ೫೪ ॥

ಅಜ್ಞಾನದಿಂದ ಸಂಭವಿಶಿದ ಚಂಡಾಲ ಅಂತ್ಯಜ ಸ್ತ್ರೀರಸಂಗದಿಂದಲೂ, ಅವರಲ್ಲಿ ಭೋಜನದಿಂದಲೂ, ಅವರಿಂದ ದಾನವಂ ಗ್ರಹಿಸುವದರಿಂದಲೂ ಪತಿತ ನಾಗುವನು. ಜ್ಞಾನ ಪೂರ್ವ್ವಕವಾಗಿ ಸಂಭವಿಶಿದಲ್ಲಿ ಅವರಿಗೆ ಸರಿಯಾಗುವನು. ॥ ೫೫ ॥

ಪರಪುರುಷ ಸಂಗದಿಂದುಷ್ಟಳಾದ ಸ್ತ್ರೀಯನ್ನು ಒಂದೇ ಮನೆಯೋಳ್ ನಿರ್ಬ್ಬಂಧದಿಂದಿರಿಸಬೇಕು. ಅವಳಿಗೆಪಶ್ಚಾತ್ತಾಪಸಹಿತೆಯಾದಬಳಿಕಪರಸ್ತ್ರೀಸಂಗವಂಮಾಡಿದವನಿಗೆ ಯಾವ ಪ್ರಾಯಶ್ಚಿತ್ತವೋ ಅದನ್ನವಳಿಗೆಮಾಡಿಸಬೇಕು. ॥ ೫೬

ಅವಳುಪುನಃ ಸಜಾತೀಯಪರಪುರುಷನಸಂಗಕ್ಕೆಹೊದರೆ ಕೃಛ್ರಚಾಂದ್ರಾಯಣ ಗಳೆರಡರನ್ನೂ ಮಾಡಿಸಬೇಕು.

ಯಾವನೊಂದುರಾತ್ರಿ ಶೂದ್ರಸ್ತ್ರೀ ಸಂಗವಂ ಮಾಡುವನೊ, ಅವನು, ಮೂರುವರುಷ ಏಕಭುಕ್ತನಾಗಿ ಗಾಯತ್ರೀ ಜಪವಂ ಮಾಡಬೇಕು. ॥ ೫೭ ॥

ಪಾಪವಂಮಾಡಿದ ನಾಲ್ಕುಜಾತೀಯವರಿಗೂ ಪ್ರಾ

ಪತಿತೈಃಸಂಪ್ರಯುಕ್ತಾನಾ ಮಿಮಾಂಶೃಣುತನಿಷ್ಕೃತಿಂ ॥

ಸಂವತ್ಸರೇಣಪತತಿ ಪತಿತೇನಸಮಾಚರನ್ ॥ ಯಾಜನಾಧ್ಯಾ
ಪನಾದ್ಯೌನಾ ದನುಯಾನಾಶನಾಸನಾತ್ ॥ ೬೦ ॥

ಯೋಯೇನಪತಿತೇನೈಷಾಂ ಸಂಸರ್ಗಂಯಾತಿಮಾನವಃ ॥ ಸತ
ಸ್ಯೈವವ್ರತಂಕುರ್ಯಾತ್ತತ್ಸಂಸರ್ಗವಿಶುದ್ಧಯೆ ॥ ೬೧ ॥

ಪತಿತಸ್ಯೋದಕಂಕಾರ್ಯಂ ಸಪಿಂಡೈರ್ಬಾಂಧವೈಸ್ಸಹ ॥ ನಿಂದಿ
ತೇಹನಿಸಾಯಾಹ್ನೇ ಜ್ಞಾತಿಭಿರ್ಗುರುಸಂನಿಧೌ ॥ ೬೨ ॥

ದಾಸೀಘಟ ಮಪಾಂಪೂರ್ಣಂ ಪರ್ಯಸ್ಯೇತ್ಪ್ರೇತವತ್ಪದಾ ॥ ಅ
ಹೋರಾತ್ರ ಮುಪಾಸೀರನ್ ನಾಶೌಚಂ ಬಾಂಧವೈಸ್ಸಹ ॥

ನಿವರ್ತಯೇರಂಸ್ತಸ್ಮಾತ್ತು ಸಂಭಾಷಣಸಹಾಸನಂ ॥ ದಾಯಾ
ದಸ್ಯಪ್ರದಾನಂಚ ಯಾತ್ರಾಮೇವಂಚಲೌಕಿಕೀಂ ॥ ೬೪ ॥

ಯಶ್ಚಿತ್ತವು ಪೇಳಲ್ಪಟ್ಟಿತು. ಪತಿತರೊಡನೆ ಸೇರಿದವರಪ್ರಾಯಶ್ಚಿತ್ತವಂ ಕೇಳುವೆನಾಗು ॥ ೫೯ ॥

ಯಜನಾಧ್ಯಯನ ಯಾಜನಾಧ್ಯಾಪನ ವಿವಾಹಾನುಗಮನಶಯನಾಸನಾದಿ ವ್ಯಾಪಾರ ಗಳಲ್ಲಿ ಪತಿತರೊಡನೆ ಸೇರಿದ್ದವನು ಸಂವತ್ಸರಕ್ಕೆ ಪತಿತ ನಾಗುವನು. ॥ ೬೦ ॥

ಯಾವನು ಯಾವ ಪತಿತನೊಡನೆ ಸಹವಾಸವಂಮಾಡುವನೊ ಅವನು ಆಪತಿತನು ಮಾಡತಕ್ಕ ಪ್ರಾಯಶ್ಚಿತ್ತವನ್ನೆ ಮಾಡಬೇಕು ॥ ೬೧ ॥

ನಿಂದಿತವಾದ ದಿನದಲ್ಲಿ ಸಾಯಂಕಾಲದೊಳ್ ಗುರುಸನ್ನಿಧಿಯಲ್ಲಿ ಸಪಿಂಡರಾದ ಜನಗಳಿಂ ಕೂಡಿದ ಪತಿತನಿಗೆ ತಿಲತರ್ಪಣವಂ ಮಾಡತಕ್ಕದ್ದು ॥ ೬೨ ॥

ದಾಸಿಯಿಂತರಿಸಿದ ಜಲಪೂರ್ಣ ಘಟವಂ ಪ್ರೇತದಂತೆತಿರುಗಿಸಿ ಬಾಂಧವ ರೊಡನೆ ಅದಂಒಡದು ಒಂದು ಅಹೊರಾತ್ರ ಆಶೌಚ, ಸೂತಕವನ್ನಿರುವದು. ಇದು ಘಟಸ್ಫೋಟ ಇದಾದಬಳಿಕ ಆಜನರಂ ಗ್ರಹಿಸಲಾಗದು. ॥ ೬೩ ॥

ಸಂಭಾಷಣಾ ಸಹಾಸನಗಳನ್ನವರೊಡನೆ ಮಾಡಲಾಗದು. ದಾಯವಿಭಾಗಾದಿ ಸರ್ವವ್ಯಾಪಾರ ಗಳಲ್ಲೂ ಅವರಂತ್ಯಜಿಸಬೇಕು. ॥ ೬೪ ॥

ಜ್ಯೈಷ್ಠ್ಯಭಾವಾನ್ಯವರ್ತೇತ ಜ್ಯೈಷ್ಠಾವಾಪ್ತಂಚಪುತ್ರವಾನಃ ॥
ಜ್ಯೈಷ್ಠಾಂಶಂ ಪ್ರಾಪ್ನುಯಾ ಚ್ಛಾಸ್ಯ ಯೋವಾಸ್ಯಾದ್ಗುಣ
ತೋಧಿಕಃ ॥ ೧೭ ॥

ಸ್ಥಾಪಿತಾಂಚಾಪಿಮರ್ಯಾದಾಂ ಯೋಭಿದ್ಯಾಃ ಪಾಪಕರ್ಮಣಃ
ಸರ್ವ್ವೇಪೃಥಕ್ ದಂಡನೀಯಾ ರಾಜ್ಞಾಪ್ರಥಮ ಸಾಹಸಂ ॥

ಶತಂಬ್ರಾಹ್ಮಣಮಾಕ್ರುಶ್ಯಕ್ಷತ್ರಿಯೋದಂಡಮರ್ಹತಿ ॥ ವೈಶ್ಯ
ಸ್ತುದ್ವಿಶತಂರಾಜನ್ ಶೂದ್ರಸ್ತುವಧಮರ್ಹತಿ ॥ ೧೨ ॥

ಪಂಚಾಶದ್ಬ್ರಾಹ್ಮಣೋದಂಡ್ಯಃ ಕ್ಷತ್ರಿಯಸ್ಯಾಭಿಶಂಸನೇ ॥
ವೈಶ್ಯಸ್ಯಾಪ್ಯರ್ಧಪಂಚಾಶತ್ ಶೂದ್ರೇದ್ವಾದಶಕೋದಮಃ ॥

ಕ್ಷತ್ರಿಯಸ್ಯಾಪ್ನುಯಾ ದ್ವೈಶ್ಯಃ ಸಾಹಸಂ ಪುನರೇವಚ
ಶೂದ್ರಃಕ್ಷತ್ರಿಯಮಾಕ್ರುಶ್ಯ ಜಿಹ್ವಾಚ್ಛೇದನಮಾಪ್ನುಯಾತ್

ಪಂಚಾಶತ್ಕ್ಷತ್ರಿಯೋದಂಡ್ಯ ಸ್ತಥಾವೈಶ್ಯಾಭಿಶಂಸನೇ ॥ ಶೂ
ದ್ರೇಚೈವಾರ್ಧಪಂಚಾಶ ತ್ತಥಾಧರ್ಮೇನವಿದ್ಯತೇ ॥ ೨೦ ॥

ಹೀಗೆತ್ಯಕ್ತನಾದವನು ಜ್ಯೇಷ್ಠನಾಗಿದ್ದಲ್ಲಿ ಜ್ಯೇಷ್ಠ ಭಾವದಿಂದವನಿಗೆ ಬಂದದ್ದನ್ನು ತಮ್ಮಂದ್ರಗಲ್ಲಿ ಗುಣಜ್ಯೇಷ್ಠನಾದವನು ಗ್ರಹಿಸತಕ್ಕದ್ದು. ॥ ೬೫ ॥

ಯಾವ ಪಾಪಿಷ್ಠರು ಶಾಸ್ತ್ರಸಿದ್ಧ ಮರ್ಯಾದೆಯಂ ತಪ್ಪಿಸುವರೋ ಅವರಿಗೆ ರಾಜನು ೨೧೩ ದುಡ್ಡು ದಂಡವಂ ಬೇರೆಬೇರೆ ಹಾಕಬೇಕು. ॥ ೬೬ ॥

ಬೈಗಳು ಮೊದಲಾದ್ದರಿಂದ ಬ್ರಾಹ್ಮಣರಂ ದುಃಖಪಡಿಶಿದ ಕ್ಷತ್ರಿಯನಿಗೆ ನೂರು ದುಡ್ಡು ವೈಶ್ಯನಿಗಿನ್ನೂರು ದುಡ್ಡು ದಂಡವು. ॥ ಬ್ರಾಹ್ಮಣನಿಗೆ ವ್ಯಥೆಯನ್ನುಂಟುಮಾಡಿದ ಶೂದ್ರನಿಗೆ ವ್ಯಥಾನುಗುಣವಾಗಿ ತಾಡನ ಸಂಹರಣಾದಿ ವ್ಯಾಪಾರಗಳಿಂ ಶಿಕ್ಷೆಯಂ ಮಾಡಬೇಕು. ॥ ೬೭ ॥

ಕ್ಷತ್ರಿಯನಂ ವ್ಯಥೆಪಡಿಶಿದ ಬ್ರಾಹ್ಮಣನಿಗೆ ವೈಶ್ಯನಂ ವ್ಯಥೆಪಡಿಶಿದವನಿಗೆ ೨೫ ಶೂದ್ರನಂ ವ್ಯಥೆಪಡಿಶಿದವನಿಗೆ ೧೨ ದುಡ್ಡುಗಳು ದಂಡವು ॥ ೬೮ ॥

ಕ್ಷತ್ರಿಯನಿಗೆ ಮೋಸವಂ ಮಾಡಿದ ವೈಶ್ಯನಿಗೆ ೫೦ ದುಡ್ಡು ಶೂದ್ರನಿಗೆ ಜಿಹ್ವಾಚ್ಛೇದವೆಂದು ದಂಡವು. ॥ ೬೯

ವೈಶ್ಯನಿಗೆ ವ್ಯಥೆಯಂ ಮಾಡಿದ ಕ್ಷತ್ರಿಯನಿಗೆ ೫೦ ಶೂದ್ರನಂ ವ್ಯಥೆ ಪಡಿಶಿದವನಿಗೆ ೨೫ ದುಡ್ಡುಗಳು ದಂಡವು

ವೈಶ್ಯಸ್ಯಾಕ್ರೋಶನೇದಂಡ್ಯಃ ಶೂದ್ರಃಕ್ಷತ್ರನುಸಾಹಸಂ ॥
ಶೂದ್ರಾಕ್ರೋಶೇತಥಾವೈಶ್ಯಃ ಶತಾರ್ಧಂದಂಡಮರ್ಹತಿ ॥ ೭೧ ॥

ಸುವರ್ಣಾಕ್ರೋಶನೇದಂಡ್ಯಃ ಸ್ತಥಾದ್ವಾದಶಕಂಸ್ಮೃತಂ ॥ ವಾದೇಷ್ವವಚನೀಯೇಷು ತದೇವದ್ವಿಗುಣಂಭವೇತ್ ॥ ೭೨ ॥

ಏಕಜಾತಿರ್ದ್ವಿಜಾತಿಂತು ವಾಚಾದಾರುಣಯಾಕ್ಷಿಪನ್ ॥
ಜಿಹ್ವಾಯಾಃಪ್ರಾಪ್ನುಯಾಚ್ಛೇದಂ ಜಘನ್ಯಃ ಪ್ರಧನೋಹಿ ಸಃ ॥ ೭೩ ॥

ನಾಮಜಾತಿಗ್ರಹಂತೇಷಾ ಮಭಿದ್ರೋಹೇಣಕುರ್ವತಃ ॥ ನಿಕ್ಷೇಪ್ಯೋಯೋಮಯಶ್ಶಂಕುರ್ಜ್ವಲನ್ನಾಸ್ಯೇದಶಾಂಗುಲಃ

ಧರ್ಮೋಪದೇಶಂಶೂದ್ರಸ್ತು ದ್ವಿಜಾನಾಮಭಿಕುರ್ವತಃ ॥ ಸಪ್ತಮಾಸೇಚಯೇತ್ತೈಲಂ ವಕ್ತ್ರೇಶ್ರೋತ್ರೇಚಪಾರ್ಥಿವಃ ॥ ೭೪

ಶ್ರುತಿಂದೇಶಂಚಜಾತಿಂಚ ಕರ್ಮಶಾರೀರಮೇವಚ ॥ ವಿತಥಂಚ ಬ್ರುವಂದಂಡ್ಯೋರಾಜಾ ದ್ವಿಗುಣಸಾಹಸಂ ॥ ೭೬ ॥

ವೈಶ್ಯನಂ ವ್ಯಥೆಪಡಿಶಿದ ಶೂದ್ರನಿಗೆ ೧:೮೦ ದುಡ್ಡು ಗಳು ಶೂದ್ರನಂ ವ್ಯಥೆ ಪಡಿಶಿದ ವೈಶ್ಯನಿಗೆ ೫೦ ದುಡ್ಡುಗಳು ದಂಡವು. ॥ ೭೧ ॥

ಸಮಾನವರ್ಣರಾದವರಂ ವ್ಯಥೆಪಡಿಶಿದವರಿಗೆ ೧೨ದು ಡ್ಡು ಆಡಬಾರದ ಮಾತುಗಳಿಂ ವ್ಯಥೆಪಡಿಶಿದವರಿಗೆ ೨೪ ದು ಡ್ಡುಗಳು ದಂಡವು. ॥ ೭೨ ॥

ಆಡಬಾರದ ಮಾತುಗಳಿಂ ಬ್ರಾಹ್ಮಣನಂ ವ್ಯಥೆಪಡಿಶಿ ದ ಶೂದ್ರನಿಗೆ ಜಿಹ್ವಾಛ್ಛೇದವೆ ದಂಡವೆನಿಸುವದು. ॥ ಬ್ರಾ ಹ್ಮಣನು ಪ್ರಥಮ ವರ್ಣದವನಾದ್ದರಿಂ ದೀರೀತಿಯಾದ ವ್ಯ ವಸ್ಥೆಯು

ಬ್ರಾಹ್ಮಣನಿಗೆ ದ್ರೋಹವಂ ಮಾಡುತ್ತಾ ಅವನ ನಾ ಮಜಾತಿ ಗೃಹಗಳಂ ತನ್ನ ನಾಮಕಾದಿಗಳಂ ಯಾವನುಪ್ರಸಿ ದ್ಧಿ ಪಡಿಸುವನೊ, ಆಶೂದ್ರನ ಬಾಯಿಗೆ ದಶಾಂಗುಲ ತಪ್ತ ಶಂಕುವಂ ಹಾಕಿಸಬೇಕು, ॥ ೭೪ ॥

ಬ್ರಹ್ಮಕ್ಷತ್ರವೈಶ್ಯರಿಗೆ ಯಾವಶೂದ್ರನು ಧರ್ಮೋಪದೇ ಶವಂ ಮಾಡುವನೊ ಅವನಬಾಯಿ ಕಿವಿಗಳಿಗೆ ತೈಲವಂಕಾ ಯಿಶಿ ಹುಯಿಸಬೇಕು. ॥ ೭೫ ॥

ಶ್ರುತಿ, ದೇಶ, ಜಾತಿ, ಶರೀರಸಂಬಧ್ಯಕರ್ಮಗಳನ್ನನೃತ ವಾಗಿ ಪೇಳಿದವನಿಂದ ರಾಜನು ೨೧೬೦ ದುಡ್ಡು ದಂಡವಂ ಗ್ರಹಿಸಬೇಕು. ॥ ೭೬ ॥

ಯಸ್ತು ಪಾತಕ ಸಂಯುಕ್ತಃ ಕ್ಷಿಪೇದ್ವರ್ಣಾಂತರಂನರಃ ॥ ಉ
ತ್ತಮಂಸಾಹಸಂದಂಡಃ ಪಾದ್ಯಸ್ತಸ್ಮಿನ್ಯಥಾಕ್ರಮಂ ॥ ೭೭

ರಾಜ್ಞೋ ನಿವೇಶನಿಯಮಂ ವಿತಥಂಯಾಂತಿ ವೈಮಿಥಃ ॥
ಸರ್ವೇದ್ವಿಗುಣದಂಡ್ಯಾಸ್ತೇ ವಿಪ್ರಲಂಭಾನ್ನೃಪಸ್ಯತು॥ ೭೮ ॥

ಪ್ರೀತ್ಯಾಮಯಾಸ್ಯಾಭಿಹಿತಂ ಪ್ರಮಾದೇನಾಥವಾವದೇತ್ ॥
ಭೂಯೋನಚೈವಂವಕ್ಷ್ಯಾಮಿ ಸತು ದಂಡಾರ್ಧಭಾಕ್ಭವೇತ್

ಕಾಣಂವಾಪ್ಯಥವಾಖಂಜ ಮಂಧಂಚಾಪಿತಥಾವಿಧಂ ॥ ತ
ಥ್ಯೇವಾಪಿಬ್ರುವನ್ದಾಪ್ಯೋದಂಡಂಕಾರ್ಷಾಯಣಂಧನಂ ॥ ೮೦

ಮಾತರಂಪಿತರಂಜ್ಯೇಷ್ಠಂ ಭ್ರಾತರಂಶ್ವಶುರಂಗುರುಂ ॥ ಆಕ್ರೋ
ಶಯಞ್ಛತಂದಂಡ್ಯಃಪಂಥಾನಂಚಾದದನ್ಗುರೋಃ ॥ ೮೧

ಗುರುವರ್ಜಂತುಮಾರ್ಗಂ ಯೋಹಿಮಾರ್ಗಂನಯಚ್ಛತಿ ॥
ಸದಾಪ್ಯಃಕೃಷ್ಣಲಂರಾಜ್ಞಃ ತಸ್ಯಪಾಪಸ್ಯಶಾಂತಯೆ ॥ ೮೨

ಯಾವನು ಸ್ವತಃ ಪಾತಕಿಯಾಗಿ ಇತರವರ್ಣದವರ ಮೇಲೆ ದೋಷಸ್ಥಾಪನವಂ ಮಾಡುವನೋ ಅವನಿಗೆ ೧೦೮೦ ದುಡ್ಡುಗಳು ದಂಡವು. ॥ ೭೭ ॥

ಯಾವಅಧಿಕಾರಿಗಳು ರಾಜನಿಯಮಕ್ಕೆ ವಿರೋಧವಂಮಾಡುತ್ತಾ ರಾಜನಿಗೆ ವಂಚನೆಯಂಮಾಡುವರೋ ಅವರೆಲ್ಲರಿಗೂ ೨೧೬೦ ದುಡ್ಡುಗಳದಂಡವು. ॥ ೭೮ ॥

ನಿರ್ಮರ್ಯಾದೆಯಾಗಿ ಆಡಿದ ಮಾತನ್ನು ಪ್ರೀತಿಯಿಂದಲಾಗಲೀ ಪ್ರಮಾದದಿಂದಲಾಗಲೀ ಆಡಿದೆನು ಇನ್ನು ಮೇಲೆ ಆಡುವದಿಲ್ಲವೆಂದು ತಪ್ಪಿತ ಕೊಳ್ಳುವನೋ ಅವನಿಗೆ ಹತ್ತು ದುಡ್ಡು ದಂಡವು. ॥ ೭೯ ॥

ಮೊಕ್ಕಣ್ಣ, ಕುರುಡ, ಕುಂಟ, ಹೆಳವ, ಮೋಟ, ಮೊದಲಾದ ಅಂಗ ಹೀನರನ್ನು ಮರ್ಯಾದವಾಗಿಮಾತನಾಡಿಸದವನಿಗೆ ೧ ರೂಪಾಯಿ ದಂಡವು. ॥ ೮೦ ॥

ತಾಯಿ, ತಂದೆ, ಜ್ಯೇಷ್ಠಭ್ರಾತೃ,ಮಾವಮೊಂದರೆರನ್ನು ಬೈದು ವ್ಯಥೆ ಪಡಿಶಿದವನಿಗೂ, ಗುರುವಂ ದಾರಿ ಬಿಡೆಂದು ಹೇಳಿದವನಿಗೂ ೧೦೦ ದುಡ್ಡುದಂಡವು. ॥ ೮೧ ॥

ಗುರುವಿಗೆ ತಡೆಯಾಗಿನಿಂತು ಮಾರ್ಗವಂಬಿಡದಿರುವವನಿಗೆ ಗುಂಜಾತೂಕ ಸುವರ್ಣ ದಂಡವು. ॥ ೮೨ ॥

ಶೂದ್ರನು ಯಾವ ಅಂಗದಿಂ ಬ್ರಾಹ್ಮಣನಿ ಗಪರಾಧ

ಏಕಜಾತಿರ್ದ್ವಿಜಾತಿಂತು ಯೇನಾಂಗೇನಾಪರಾಧ್ನುಯಾತ್
ತದೇವಛೇದಯೇತ್ತಸ್ಯ ಕ್ಷಿಪ್ರಮೇವವಿಚಾರಯನ್ ॥ ೮೩ ॥
ಅವನಿಷ್ಠೀವತೋದರ್ಪಾತ್ ದ್ವಾವೋಷ್ಠೌಛಾದಯೇನ್ನೃಪ ॥
ಅವಮೂತ್ರಯತೋಮೇಂದ್ರಮಪಶಬ್ದಯತೋಗುದಂ ॥ ೮೪ ॥

ಸಹಾಸನಮಭಿಪ್ರೇಪ್ಸುರುತ್ಕೃಷ್ಟಸ್ಯಾಪಕೃಷ್ಟಜಃ ॥ ಕಟ್ಯಾಂ
ಕೃತಾಂಕೋನಿರ್ವಾಸ್ಯಃಸ್ಫಿಚಂವಾಸ್ಯಾವಕರ್ತಯೇತ್ ॥ ೮೫ ॥

ಕೇಶೇಷುಗೃಹ್ಣತೋಹಸ್ತಂ ಛೇದಯೇದವಿಚಾರಯನ್ ॥ ಪಾದೇ
ಯೋನಾಸಿಕಾಯಾಂಚ ಗ್ರೀವಾಯಾಂವೃಷಣೇಷುಚ ॥ ೮೬ ॥

ತ್ವಗ್ಭೇದಕಶ್ಶತಂದಂಡ್ಯೋಲೋಹಿತಸ್ಯಚದರ್ಶಕಃ ॥ ಮಾಂಸಭೇ
ತ್ತಾಚಷಣ್ಣಿಷ್ಕಾನ್ನಿರ್ವಾಸ್ಯಸ್ತ್ವಸ್ಥಿಭೇದಕಃ ॥ ೮೭ ॥

ಅಂಗಭಂಗಕರಸ್ಯಾಂಗಂ ತದೇವಾಪಹರೇನ್ನೃಪಃ ॥ ದಂಡಪಾ
ರುಷ್ಯಕೃದ್ದಂಡ್ಯೋ ಸಮುತ್ಥಾನ ವ್ಯಯಂತಥಾ ॥ ೮೮ ॥

ವಂ ಮಾಡುವನೊ ಅವನ ಆ ಅಂಗವಂ ವಿಚಾರಿಸದೆ ಛೇದಿಸಬೇಕು. ॥ ೮೩ ॥

ಗುರುವಿನ ಮೇಲೆ ಉಗಳಿದ ಶೂದ್ರನ ತುಟಿಗಳನ್ನು ಮೂತ್ರಿಶಿದವನ ಶಿಶ್ನವನ್ನು ಹೂಶಿದವನ ಗುದವನ್ನು ಛೇದಿಸಬೇಕು. ॥ ೮೪ ॥

ಉತ್ತಮವರ್ಣ್ಣನಾದವ ನೊಡನೆ ಏಕಾಸನದಲ್ಲಿ ಕುಳ್ಳಿರಲಿಚ್ಛೈಶಿದ ಹೀನವರ್ಣ್ಣದವನನ್ನು ನಡುವಿನಮೇಲೆ ಬರೆಯಂಹಾಕಿ ತಳ್ಳಿಸಬೇಕು. ಅಥವಾಗುದದ ಹಿಂಭಾಗವಂ ಕತ್ತರಿಸಬೇಕು. ॥ ೮೫ ॥

ಕೇಶ, ಪಾದ, ನಾಸಿಕಾ ಕುಚ, ವೃಷಣಗಳಂ ಪಿಡಿದು ಬ್ರಾಹ್ಮಣನಂ ವ್ಯಥೆಪಡಿಶಿದ ಶೂದ್ರನ ಕೈಯ್ಯಂಕತ್ತರಿಸಬೇಕು ॥ ೮೬ ॥

ಪ್ರಹಾರದಿಂ ಬ್ರಾಹ್ಮಣನ ಚರ್ಮವಂ ಭೇದಿಶಿದ ಶೂದ್ರನಿಗೂ, ರಕ್ತವಂ ಕಾಣಿಶಿದವನಿಗೂ ೧೦೦ ದುಡ್ಡು ದಂಡವು. ಮಾಂಸವಂ ಛೇದಿಶಿದವನಿಗೆ ೬ ವರಹಾದಂಡವು. ಮೂಳೆಯಂ ಭೇದಿಶಿದವನಿಗೆ ಗ್ರಾಮದಿಂ ಪೊರಮಡಿಸುವದೆ ದಂಡವು. ॥ ೮೭ ॥

ಅಂಗಭಂಗವಂ ಮಾಡಿದವನಿಗೆ ಆ ಅಂಗವನ್ನೆ ಛೇದಿಸಬೇಕು. ಬ್ರಾಹ್ಮಣನಿಗೆ ಪ್ರಹಾರ ದಿಂದಲೂ ನಿಷ್ಠೂರ

ಅರ್ಧಪಾದೇಕರಃಕಾರ್ಯೋ ಗೋಗಜಾಶ್ವೋಷ್ಟ್ರಘಾತಕಃ ॥ ಪಶು
ಕ್ಷುದ್ರಮೃಗಾಣಾಂಚಹಿಂಸಾಯಾಂದ್ವಿಗುಣೋದಮಃ ॥ ೮೯

ಶುಂಚಾಶಚ್ಚ ಭವೇದ್ದಂಡ್ಯಸ್ತೃಥೈವಮೃಗಪಕ್ಷಿಷು ॥ ಕ್ರಿಮಿಕೀ
ಟೇಷುದಂಡ್ಯಸ್ಯಾದ್ರಜತಸ್ಯೈಚಮಾಷಕಂ ॥ ೯೦ ॥

ತಸ್ಯಾನುರೂಪಂ ಮೌಲ್ಯಂ ಚಪ್ರದದ್ಯಾತ್ಸ್ವಾಮಿನೇ ತಥಾ ॥
ಸ್ವಸ್ವಾಮಿಕಾನಾಂಸಕಲಂ ಶೇಷಾಣಾಂಸಕಲಂತಥಾ ॥ ೯೧

ವೃಕ್ಷಂತುಸಫಲಂಛಿತ್ವಾ ಸುವರ್ಣ್ಣಂದಂಡಮರ್ಹತಿ ॥ ದ್ವಿಗು
ಣಂದಂಡಯೇಚ್ಚೈನಂಪಥಿಸೀಮ್ನಿ ಜಲಾಶಯೇ ॥ ೯೨ ॥

ಛಿದೇನಾದಫಲಸ್ಯಾಪಿ ಮಧ್ಯಮಂಸಾಹಸಂಸ್ಮೃತಂ ॥ ಸು

ಭಾಷೆಯಿಂದೆಲೂ ವ್ಯಧೆಯುನ್ನುಂಟುಮಾಡಿದ ಅಧಿಕಾರಿಗೆ ಅಧಿಕಾರವಂ ತಪ್ಪಿಸಬೇಕು. ॥ ೮೮ ॥

ಗೋಗಜಾಶ್ವೋಷ್ಟ್ರಪ್ರೋತನ ಕೈಕಾಲುಗಳನ್ನರ್ಧ ಕತ್ತರಿಸಬೇಕು. ಪಶು, ಪಕ್ಷಿ, ಮೃಗಗಳಂ ಹಿಂಸೆಪಡಿಶಿದ ವನಿಗೆ ೫೦೦ ದುಡ್ಡು ದಂಡವಂ ಹಾಕಿ ಆಪದಾರ್ಥವನ್ನದರ ಯಜಮಾನನಿಗೆ ಕೊಡಿಸಬೇಕು. ॥ ೮೯ ॥

ದೊಡ್ಡಮೃಗ ಪಕ್ಷಿಗಳಂ ಹೊಡೆದವನಿಗೆ ೫೦ಮಾಷತೂಕ ಬೆಳ್ಳಿಯು ದಂಡವು. ಕೃಮಿ, ಕೀಟಕಗಳಂಕೊಂದವನಿಗೆ ಒಂದು ಮಾಷತೂಕ ದಂಡವು ॥ ೯೦ ॥

ಮೃಗಾದಿಗಳಂ ಕೊಂದವನು ಅವುಗಳ ಕ್ರಯವಂ ಯಜಮಾನನಿಗೆ ಕೊಡಬೇಕು. ಆ ಮೃಗಾದಿಗಳು ರಾಜಕೀಯ ವಾಗಲೀ, ಅರಣ್ಯಕ ವಾಗಲೀ, ಮೃಗಾದಿ ಕ್ರಯುವಂ, ದಂಡವಂ ಸಹ ರಾಜನೇಗ್ರಹಿಸಬೇಕು. ॥ ೯೧ ॥

ಫಲಿಸುವ ವೃಕ್ಷವಂ ಛೇದಿಸುವನಿಗೆ ಒಂದುತೊಲಾ ಸುವರ್ಣದಂಡವು. ಆ ವೃಕ್ಷವು ಮಾರ್ಗದಲ್ಲೋ, ಯಲ್ಲೆಗಟ್ಟಲ್ಲೋ, ಜಲಾಶಯದ ಸಮೀಪದಲ್ಲೋ ಇದ್ದದ್ದೆ ಆದರೆ ೨ ತೊಲಾ ಸುವರ್ಣದಂಡವು. ॥ ೯೨ ॥

ಫಲಿಸದವೃಕ್ಷವಂ ಛೇದಿಶಿದವನಿಗೆ ೫೦೦ ದುಡ್ಡುದಂ

ಲ್ಕ್ರವಲ್ಲೀಂಲತ್ರಾನಾಂಚಸುವರ್ಣಸ್ಯಚಪಮಾಷಕಂ ॥ ೯೩ ॥

ದೇಶಕಾಲಾನುರೂಪೇಣ ಮೂಲ್ಯಂ ರಾಜಾದ್ಯುಪಾದಿಷು ॥ ತ
ತ್ಸ್ವಾಮಿನಸ್ತಥಾದೇಂಡ್ಯೋದಂಡಪೂರ್ತ್ತಂತುಪಾರ್ಥಿವ ॥ ೯೪ ॥

ಯತ್ರಾತಿವರ್ತ್ತತೆಯೋಗ್ಯಂ ವೈಗುಣ್ಯಾತ್ಯಾಜಕಸ್ಯತು ॥
ತತ್ರಸ್ವಾಮೀಭವೇದ್ದಂಡ್ಯೋನಾಪ್ತಶ್ಚೇತ್ಯಾಜಕೋಭವೇತ್

ಯಾಜಕಶ್ಚ ಭವೇದಾಪ್ತಃ ಯಾಜಕೋದಂಡಮರ್ಹತಿ ॥ ನಾಪಿ
ದಂಡಕ್ಷೇತ್ರಸ್ಯಾಪಿ ತಥಾವೈಹೇತುಕಲ್ಪಕಃ ॥

ದ್ರವ್ಯಾಣಿಯೋಹರೇದ್ಯಸ್ಯ ಜಾನತೋಜಾನತೋಪಿವಾ ॥ ಸತ
ಸ್ಯೋತ್ಪಾದಯೇತ್ತುಷ್ಟಿಂ ರಾಜ್ಞೋ ದದ್ಯಾತ್ತತೋದಮಂ ॥

ಡವು. ಪೊದೆಬಳ್ಳಿ ಮರದ ಕೊಂಬೆಗಳಂ ಛೇದಿಶಿದವನಿಗೆ ಒಂದುಮಾಷಸುವರ್ಣ ದಂಡವು. ॥ ೯೩ ॥

ನಿರರ್ಥಕವಾಗಿ ತೃಣವಂ ಛೇದಿಶಿದವನಿಗೆ ಒಂದು ರೌಪ್ಯ ದಂಡವು. ನಿಷ್ಕಾರಣ ಪ್ರಾಣಿಗಳಂಕೊಂದವನಿಗೆ ೬ ಗುಂಜಾತೂಕಸುವರ್ಣವು. ॥ ೯೪ ॥

ವೃಕ್ಷಾದಿಗಳ ವಿಷಯದಲ್ಲಿ ಅವುಗಳ ಪ್ರಭುಗಳನ್ನು ಕೂಡ ಯಥೋಕ್ತವಾದ ದಂಡದಿಂ ರಾಜನು ದಂಡಿಸಬೇಕು. ॥ ೯೫ ॥

ಆಪ್ತನಲ್ಲದೆ ಗಾಡಿ ನಡೆಸುವನತ್ತಿತ್ತ ಪೋಗಿರುವಲ್ಲಿ ಗಾಡಿ, ಯತ್ತು ಮೀರಿ ತಪ್ಪಿ ನಡೆಯಲು ಆ ಗಾಡಿಯ ಸ್ವಾಮಿಯು ದೇಶಕಾಲಾನುರೂಪವಾದಶಿಕ್ಷೆಗೆ ಯೋಗ್ಯನು ॥

ನಡೆಸುವವನಾಪ್ತನಾಗಿದ್ದಲ್ಲಿ ಅವನೇ ಶಿಕ್ಷೆಗೆ ಯೋಗ್ಯನು ಗಾಡಿಹೊರಳುವದಕ್ಕೆ ವಾಸ್ತವಿಕವಾಗಿ ಅವನು ಕಾರಣನಾಗದಿದ್ದಲ್ಲಿ ಅವನಿಗೆ ಶಿಕ್ಷೆಯಿಲ್ಲ ॥ ೯೬ ॥

ಧನಸ್ವಾಮಿಗೆ ತಿಳಿಸಿಯಾಗಲಿ ತಿಳಿಸದೆಯಾಗಲೀ ಯಾವನ ಹಣವಂ ಯಾವನು ಮೋಸದಿಂ ತೆಗೆದುಕೊಳ್ಳುವನೊ ಅವನಾಧನಸ್ವಾಮಿಗೆ ಧನವಂ ಕೊಡುವದ್ದರಿಂ ಸಂತೋಷಪಡಿಶಿ ರಾಜನಿಗೂ ದಂಡವಂತೆರಬೇಕು. ॥ ೯೭

ಯಸ್ತುರಜ್ಜುಂ ಘಟಂಕೂಪಾ ದ್ಧರೇದ್ಭಿಂ ದ್ಯಾಚ್ಚ ತಾಂಪ್ರ
ಪಾಂ। ಸದಂಡಂಪ್ರಾಪ್ನುಯಾನ್ಮಾಷಂ ತಚ್ಚ ಸಂಪ್ರತಿಪಾದ
ಯೇತ್ ॥ ೯೯ ॥

ಧಾನ್ಯಂದಶಭ್ಯಃಕುಂಭೇಭ್ಯೋಹರತೋಭ್ಯಧಿಕಂವಧಃ ॥ ಶೇ
ಷೇಪ್ಯೇಕಾದಶಗುಣಂ ತಸ್ಯದಂಡಂಪ್ರಕಲ್ಪಯೇತ್ ॥ ೧೦೦ ॥

ತಥಾಭಕ್ಷ್ಯಾನ್ನದಾನಾನಾಂ ನತಥಾಪ್ಯಧಿಕಂವಧಃ ॥ ಸುವ
ರ್ಣರಜತಾದೀನಾಮುತ್ತಮಾನಾಂಚವಾಸಸಾಂ ॥ ೧೦೧ ॥
ಪುರುಷಾಣಾಂಕುಲೀನಾನಾಂ ನಾರೀಣಾಂಚವಿಶೇಷತಃ ॥
ಮಹಾಪಶೂನಾಂಹರಣೇ ಶಸ್ತ್ರಾಣಾಮೌಷಧಸ್ಯಚ ॥ ೨
ಮುಖ್ಯಾನಾಂಚೈವರತ್ನಾನಾಂ ಹರಣೇವಧಮರ್ಹತಿ ॥

ದಧ್ನಃಕ್ಷೀರಸ್ಯತಕ್ರಸ್ಯ ಪಾನೀಯಸ್ಯರಸಸ್ಯಚ ॥ ೧೦೩
ವೇಣುವೈದಲಭಾಂಡಾನಾಂ ಲವಣಾನಾಂತಥೈವಚ ॥

ಯೆಾವನು ಬಾವಿಯ ಹಗ್ಗವನ್ನು ಕೇದಿಕ್ಕೊಳ್ಳು
ವ ಘಟಾದಿ ಪಾತ್ರೆಯನ್ನು ಅಪಹರಿಸುವನೊ ಅರವಟ್ಟಿಗೆ
ಯಂ ಭೇದಿಸುವನೊ ಅವನಿಂದಾ ಪದಾರ್ಥಗಳಂ ಪೂರ್ವದಂ
ತೆ ಹಾಕಿಸುವದಲ್ಲದೆ ಮಾಷತೂಕ ಸುವರ್ಣದಂಡವಂ ಗ್ರ
ಹಿಸಬೇಕು. ‖ ೯೯ ‖

ಹತ್ತುಗಡಿಗೆಗೆ ಅಧಿಕವಾದಧಾನ್ಯವಂ ಕದ್ದವನಿಗೆ
ಪ್ರಾಣಾಂತ ದಂಡವು ಕಡಮೆಯಾಗಿ ಕದ್ದವನಿಗೆ ಏಕಾ
ದಶಗುಣಅಧಿಕವಾದ ಧಾನ್ಯವಂಗ್ರಹಿಸುವದೇ ದಂಡವು.

ಅನ್ನ, ಭಕ್ಷ್ಯ, ಪಾನದ್ರವ್ಯಗಳಂ ತನಗೆತಕ್ಕಷ್ಟ
ಕ್ಕಿಂತ ಅಧಿಕವಾಗಿಕದ್ದರೂ, ಪ್ರಹಾರವಲ್ಲದೆ ಪ್ರಾಣಾಂ
ತದಂಡಕೂಡದು. ಸುವರ್ಣ, ರಜತಾದಿಧಾತು ಉತ್ತಮ ವ
ಸ್ತ್ರ ಕುಲಕ್ಕೆಬಂದ ಪುರುಷಸ್ತ್ರೀರು ಗಜಾದಿ ಮಹಾಪಶು
ಮುಖ್ಯೌಷಧ ಮುಖ್ಯರತ್ನ ಶಸ್ತ್ರಇವುಗಳಂ ಕದ್ದವನಿಗೆ
ವಧವು. ‖ ೧೦೦ ‖

ದಧಿ, ಕ್ಷೀರ, ತಕ್ರ, ರಸದ್ರವ್ಯ ವೇಣು ಪಾನೀಯ
ಮರದಪಾತ್ರ ಬೀಸುಗಲ್ಲು ಗಡಿಗೆ ಲವಣ ಮೃಣ್ಮಯ
ಪದಾರ್ಥ ಮೃತ್ತು, ಭಸ್ಮ ಇವುಗಳ ಚೌರ್ಯದ ವಾರ್ತೆ ಆ

ಮೃಣ್ಮಯಾನಾಂಚ ಸರ್ವೇಷಾಂ ಮೃದೋಭಸ್ಮ ನಪಿವಚ

ಕಾಲಮಾಸಾದ್ಯಕಾರ್ಯಂಚ ರಾಜಾದಂಡ ಪ್ರಕಲ್ಪಯೇತ್ ।

ಗೋಷುಬ್ರಾಹ್ಮಣ ಸಂಸ್ಥಾಸು ಮಹಿಷೀಷು ತಥೈವಚ ।

ಅಶ್ವಾಪ ಹಾರಕಶ್ಚೈವ ಸದ್ಯಃಕಾರ್ಯೋರ್ಧ ಪಾದಕಃ ।

ಸೂತ್ರಕಾರ್ಪಾಸಕಿಣ್ವಾನಾಂ ಗೋಮಯಸ್ಯಗುಡಸ್ಯಚ ।

ಮತ್ಸ್ಯಾನಾಂ ಪಕ್ಷಿಣಾಂಚೈವ ತೈಲಸ್ಯಚಘೃತಸ್ಯಚ ।

ಮಾಂಸಸ್ಯ ಮಧುನಶ್ಚೈವ ಯಚ್ಚಾನ್ಯದ್ಪಶುಸಂಭವಂ ।

ಅನ್ಯೇಷಾಂ ಲವಣಾದೀನಾಂ ಮದ್ಯಾನಾಮೋದನಸ್ಯಚ ।

ಪಕ್ವಾನ್ನಾನಾಂಚಸರ್ವೇಷಾಂ ತನ್ಮೂಲ್ಯಾದ್ದ್ವಿಗುಣೋದಮಃ

ಪುಷ್ಪೇಷುಹರಿತೇಧಾನ್ಯೇ ಗುಲ್ಮವಲ್ಲೀಲತಾಸುಚ ।

ಅನ್ನೇಷು ಚಾಪೂರ್ಣೇಷು ದಂಡಸ್ಯಾತ್ಪಂಚ ಮಾಷಕಂ ।

ಪರಿಪೂರ್ಣೇಷು ಧಾನ್ಯೇಷು ಶಾಖ ಮೂಲ ಫಲೇಷುಚ ।

ನಿರನ್ವಯೇ ಶತಂ ದಂಡ್ಯಃ ಸಾನ್ವಯೇ ದ್ವಿಶತಂ ದಮಃ

ಸ್ಥಾನಕ್ಕೆ ನಿಯಮಕಾಲದೊಳಗೆ ಬಂದರೆ ರಾಜನುದಂಡಿ ಸಬೇಕು. ॥ ೧೦೪ ॥

ಬ್ರಾಹ್ಮಣನ ಮನೆಯಲ್ಲಿ ಗೋಮಹಿಷ್ಯಶ್ವಗಳಂ ಕದ್ದವನ ಅರ್ಧ ಕಾಲಂ ಕತ್ತರಿಸಬೇಕು. ॥ ೫ ॥

ಧಾರ, ಹತ್ತಿ, ಮದ್ಯ ಬೀಜ, ಗೋಮಯ, ಬೆಲ್ಲ ಮೀನು, ಹಕ್ಕಿ, ತೈಲ, ಘೃತ, ಮಾಂಸ, ಉದ್ದು ಜೇನು ಮೊದಲಾದ ಚಿಲ್ಲರೆ ಪದಾರ್ಥ ಮತ್ತು ಲವಣಾದಿಗಳು ಮದ್ಯ, ಅನ್ನ, ಅನ್ನವಿಶೇಷಗಳು ಇವುಗಳಂ ಕದ್ದವನಿಗೆ ಅದೆಕ್ಕೆಷ್ಟು ಕ್ರಯವೋ ಅದಕ್ಕೆ ದ್ವಿಗುಣವಾದ ದಂಡವು.

ಪುಷ್ಪ, ಹಸರುಧಾನ್ಯ, ಪೊದೆ, ಬಳ್ಳಿ ಮರದೆಕೊಂಬೆ, ಪರಿಪೂರ್ಣವಾಗಿಅನ್ನ ಇವುಗಳಂ ಕದ್ದವನಿಗೆ ೫ ಮಾಷದ ಚಿನ್ನದಂಡವು. ॥ ೯ ॥

ಪರಿಪೂರ್ಣವಾದ ಧಾನ್ಯಶಾಕ ಮೂಲಫಲಗಳಂಕದ್ದವನಿಗೆ ೫ ಮಾಷ ಚಿನ್ನದಂಡವು. ಈ ಪದಾರ್ಥಗಳ ಸ್ವಾಮಿಬ್ಬನೇ ಆಗಿದ್ದಲ್ಲಿ ಸಂಪೂರ್ಣವಾಗಿ ಕದ್ದವನಿಗೆ ೧೦೦ ದುಡ್ಡುದಂಡವು. ಪದಾರ್ಥ ಸ್ವಾಮಿಯು ಸಕುಟುಂಬನಾಗಿದ್ದಲ್ಲಿ ೨೦೦ ದುಡ್ಡು ದಂಡವು. ॥ ೧೧೦ ॥

ಯೇನ ಯೇನ ಯಥಾಂಗೇನ ಸ್ತೇನೋ ನೃಷುವಿಚೇಷ್ಟತೇ ॥
ತತ್ತದೇವಹರೇತ್ತಸ್ಯ ಪ್ರತ್ಯಾದೇಶಾಯಪಾರ್ಥಿವಃ ॥
ತ್ರಪುಸೀರ್ಸಾಯ ಕೌದ್ವಾಚ ತಾವನ್ಮಾತ್ರಂ ಫಲೇಷುಚ ॥
ತಥಾಚಸರ್ವಧಾನ್ಯಾನಾಂ ಮುಷ್ಟಿಗ್ರಾಹೇಣಪಾರ್ಥಿವ ॥
ಶಾಕಶಾಕಪ್ರಮಾಣೇನ ಗೃಹ್ಯಮಾಣೇನದುಷ್ಯತಿ ॥

ವಾನಸ್ಪತ್ಯಂ ಫಲಂಮೂಲಂ ದಾರ್ವಗ್ನ್ಯರ್ಥಂ ತಥೈವಚ ॥
ತೃಣಗೋಭ್ಯವಹಾರಾರ್ಥ ಮಸ್ತೇಯಂಮನುರಬ್ರವೀತ್ ॥

ಅದೇವವಾಟಜಂಪುಷ್ಪಂ ದೇವತಾರ್ಥಂತಥೈವಚ ॥ ೧೧೪ ॥
ಆದದಾನಃಪರಕ್ಷೇತ್ರಾತ್ ನದಂಡಂದಾತುಮರ್ಹತಿ ॥
ಶೃಂಗಿಣಾಂನಖಿನಂರಾಜನ್ ದಂಷ್ಟ್ರಿಣಾಂಚವಧೋಽದ್ಯತಂ ॥
ಯೋಹನ್ಯಾನ್ನಸಪಾಪೇನ ಲಿಪ್ಯತೇಮನುಜೇಶ್ವರ ॥

ಗುರುಂವಾ ಬಾಲವೃದ್ಧೌವಾ ಬ್ರಾಹ್ಮಣಂವಾಬಹುಶ್ರುತಂ
ಆತತಾಇನ ಮಾಯಾಂತಂ ಹನ್ಯಾದೇವಾವಿಚಾರಯನ್

ಕಳ್ಳನು ಯಾವ ಅಂಗದಿಂದ ಅಪರಾಧಿ ಯಾಗುವ ನೋ ಆಅಂಗವಂ ಖಂಡಿಸಬೇಕು. ॥ ೧೧೧ ॥

ಬ್ರಹ್ಮ, ಕ್ಷತ್ರ, ವೈಶ್ಯರಲ್ಲಿ ಪಥಿಕನು ತತ್ಕಾಲ ಕ್ಷು ತ್ತಿನ ಶಾಂತಿಗೋಸ್ಕರ ಯರೆಡು ಕಬ್ಬು ಮೂಲ ಸವತೆಕಾ ಯಿ, ಮಿಣಿಕೆಗಣ್ಣು, ಕರ್ಬೂಜದಹಣ್ಣು, ಧಾನ್ಯಮು ಷ್ಟಿ, ಶಾಕ ಅದೆಕ್ಕತಕ್ಕ ತರ್ಕಾರಿಯಂ ಗ್ರಹಿಶಿದರೆ ದೋಷಿ ಯಾಗೂವದಿಲ್ಲ. ॥ ೧೧೨ ॥

ಕಾಡಿನಲ್ಲಿ ಫಲಮೂಲಗಳನ್ನು ಅಗ್ನಿಗೋಸುಗ ಕ ಟ್ಟಿಗೆಯನ್ನು, ಗೋವಿಗೋಸುಗ ತೃಣವನ್ನು ಗ್ರಹಿಸುವ ದು ಚೌರ್ಯವಲ್ಲವೆಂದು ಮನುವು ಪೇಳಿರುವನು. ॥ ೧೧೩

ದೇವಾರಾಮವಲ್ಲದ ಇತರಕ್ಷೇತ್ರದಲ್ಲಿ ದೇವರಿಗೋ ಸುಗ ಪುಷ್ಪವಂ ಗ್ರಹಿಶಿದವನು ದಂಡ್ಯನಾಗಲಾರನು.

ಕೊಂಬು, ಉಗುರು, ಕೋರದಾಡೆ ಯುಳ್ಳದ್ದಾಗಿ ತನ್ನಂಕೊಲ್ಲಲು ಬಂದ ಪ್ರಾಣಿಯಂ ಕೊಂದವನಿಗೆ ಪಾ ಪವಿಲ್ಲ ॥ ೧೧೪ ॥

ಗುರುವಾಗಲೀ, ಬಾಲಕನಾಗಲೀ, ವೃದ್ಧನಾಗಲೀ ಬ್ರಾಹ್ಮಣನಾಗಲೀ, ಹೊಡೆಯಲು ಬಂದವನಂ ವಿಚಾರಿಸ ದೆಹೊಡೆಯಬೇಕು. ॥ ೧೧೫ ॥

ನಾತತಾಯಿವಧೇದೋಷೋ ಹಂತುರ್ಭವತಿಕಶ್ಚನ ॥ ೧೧೩
ಪ್ರಕಾಶಂವಾಪ್ರಕಾಶಂವಾ ಮನ್ಯುಸ್ತಂಮನ್ಯುಮೃಚ್ಛತಿ

ಗೃಹಕ್ಷೇತ್ರಾಭಿಹರ್ತಾರ ಸ್ತಥಾಗವ್ಯಾಭಿಗಾಮಿನಃ ॥ ೧೮
ಆಗ್ನಿ ದೋಗರದಶ್ಚೈವ ತಥಾಚಾಭ್ಯುದ್ಯತಾಯುಧಃ
ಅಭಿಚಾರಂತುಕುರ್ವಾಣೋ ರಾಜಗಾಮಿಶ್ಚಪೈಶುನಂ ॥ ೧೯
ಏತೇಹಿ ಕಥಿತಾಲೋಕೇ ಧರ್ಮಜ್ಞೈರಾತತಾಯಿನಃ ॥
ಪರಸ್ತ್ರೀಣಾಂತುಸಂಭಾಷೇತೀರ್ಥೇರಣ್ಯೇಗೃಹೇಪಿವಾ ॥ ೧೨೦
ನದೀನಾಂಚೈವ ಸಂಭೇದೇ ಗ್ರಹಣಂಸಮವಾಪ್ನುಯಾತ್ ॥

ನಸಂಭಾಷೇತ್ಸ್ರಹಸ್ತ್ರೀಭಿಃಪ್ರತಿಷಿದ್ಧಃಸಮಾಚರೇತ್ ॥ ೨೧
ಪ್ರತಿಷಿದ್ಧಸಮಾಭಾಷ್ಯ ಸುವರ್ಣಂ ದಂಡಮರ್ಹತಿ

ನೈಷಚಾರಣದಾರೇಷು ವಿಧಿರಾತ್ಮೋಪಜೀವಿಷು ॥ ೧೨೨
ಸಜ್ಜಯಂತಿ ಮನುಷ್ಯೈಸ್ತ್ನಿ ಗೂಢಂ ವಾಚರಂತ್ಯತ ॥

ಶಸ್ತ್ರಪಾಣಿಯಾಗಿ ಹೊಡೆಯಲು ಬಂದವನಂ ಹೊಡೆಯುವದರಲ್ಲಿ ದೋಷವೇನೂ ಇಲ್ಲ. ಪ್ರಕಾಶವಾಗಿ ಯಾಗಲೀ, ಅಪ್ರಕಾಶವಾಗಿ ಯಾಗಲೀ, ಅವನಕೋಪವು ಆವನನ್ನೇ ಕೊಂದುದೆಂದು ತಿಳಿಯತಕ್ಕದ್ದು. ॥ ೧೭ ॥

ಮನೆ ಭೂಮಿಗಳಂ ಕಳುವರು. ಅಗವ್ಯಾಗಮನವಂ ಮಾಡುವರು; ಅಗ್ನಿ ವಿಷಗಳಂ ಕೊಡುವರು, ಶಸ್ತ್ರಪಾಣಿಗಳು ಶೂನ್ಯವಂ ಮಾಡುವರು ಧೊರೆಯೊಡನೆ ಕ್ಷುದ್ರವಂ ಪೇಳುವರು. ಸಹ ಆತತಾಯಿಗಳೆನಿಸುವರು. ॥ ೧೯ ॥

ತೀರ್ಥಗಳಲ್ಲೂ. ವನಗಳಲ್ಲೂ, ಮನೆಯಲ್ಲೂ, ನದಿಗಳಸಂಗಮದಲ್ಲೂ, ಪರಸ್ತ್ರೀಯರೊಡನೆ ಮಾತನಾಡಿದವನಂ ಬಂದೀಗೃಹಕ್ಕೆ ಕೇರಿಸಬೇಕು. ॥ ೨೦ ॥

ಸ್ತ್ರೀರುಗಳೊಡನೆ ವಿನೋದದ ಮಾತುಗನ್ನಾಡಬಾರದು. ಮಾತನಾಡುವದಂ ನಿಷೇಧಿಸುವನೊಡನೆಯೂ, ನಿಷಿದ್ಧನೊಡನೆಯೂ, ಆ ವಿಷಯದ ಮಾತನಾಡಬಾರದು. ಇದಂ ಮಾಡಿದವನಿಗೆ ಐಂಹಣತೂಕಸುವರ್ಣದಂಡವು ॥ ೨೧

ನಾಟ್ಯದಲ್ಲಿ ತನ್ನಿಂದುಪಜೀವಿಸುವ ಸೂಳೆಯೊಡನೆ ಮಾತನಾಡಿ ತನಗವಳಂ ತಪ್ಪಿಸುವರೋ ಇತರರಿಗೆ ಕೇರಿಸುವ

ಕಿಂಚಿದೇವತು ದಾಪ್ಯಸ್ಯಾ ತ್ಸಂಭಾಷಣಾಪ ಚಾರಯೇ‌ತ್
ಪ್ರೇಷ್ಯಾಸುಚೈವಸರ್ವಾಸು ಗೃಹಪ್ರವ್ರಜಿತಾಸುಚ ॥

ಯೋಕಾಮಾಂದೂಷಯೇತ್ಕನ್ಯಾಂ ಸಸದ್ಯೋವಧಮರ್ಹತಿ
ಸಕಾಮಾಂದೂಷಯಾನಸ್ತು ಪ್ರಾಪ್ನುಯಾದ್ವ್ಯಾಶತಂದಮಂ

ಯಶ್ಚ ಸಂರಕ್ಷಕಸ್ತತ್ರಪುರುಷಃ ಸತಥಾಭವೇತ್ ॥ ೧೨೫ ॥
ಪಾರದಾರಿಕವದ್ದಂಡ್ಯೋ ಯೋಪಿಸ್ಯಾದವಕಾಶದಃ ॥
ಬಲಾತ್ಸಂದೂಷಯೇ ದ್ಯಸ್ತು ಪರಭಾರ್ಯಾಂ ನರಃಕ್ವಚಿತ್ ॥
ವಧೋದಂಡೋಭವೇತ್ತಸ್ಯ ನಾಪರಾಧೋಭವೇತ್ಪ್ರಿಯಃ ॥
ರಜಸ್ವಲಾ ತ್ರೀಯಂಯಾಕನ್ಯಾಸ್ವಗೃಹೆಪ್ರತಿಪದ್ಯತೆ ॥ ೧೨೭
ಅದಂಡ್ಯಾಸಾಭವೇದ್ರಾಜ್ಞಾ ವರಯಂತೀಪತಿಂಸ್ವಯಾ
ಸ್ವದೇಶೆಕನ್ಯಕಾಂದತ್ವಾತಾಮಾದಾಯತಥಾವ್ರಜೇತ್ ॥ ೨೮
ಪರದೇಶೆಭವೆದ್ದಂಡ್ಯಃ ಸ್ತ್ರೀಚೋರಃಸಮತೋಭವೇತ್ ॥

ರೋತಾವೇ ಅವಳಲ್ಲಾಸಕ್ತರಾಗುವರೋ ಹೇಗೆ ದಾಸಿಯು ರಲ್ಲೂ ಮನೆಯಿಂದ ಹೊರಗೆ ಹಾಕಿದವರಲ್ಲೂ ನಡೆಯುವರೋ ಅವರಿಗೆ ಸುವರ್ಣ ದಂಡವಾಗಲಾರದು. ಲೋಕ ಮರ್ಯಾದಾಪಾಲನಾರ್ಥವಾಗಿ ರಾಜನವರಿಗೆ ಯತ್ಕಿಂಚಿದ್ದಂಡವಂ ವಿಧಿಸಬೇಕು. ॥ ೧೨೩ ॥

ಇಚ್ಛೆಯಿಲ್ಲದ ಕನ್ಯೆಯನ್ಯಾವನು ಕೆಡಿಸುವನೊ ಅವನಂ ತತ್ಕ್ಷಣದಲ್ಲೆ ಸಂಹರಿಸಬೇಕು. ಇಚ್ಛೆಯುಳ್ಳ ಕನ್ಯೆಯಂ ಕೆಡಿಶಿದವನಿಗೆ ೨೦೦ದುಡ್ಡು ದಂಡವು. ॥ ೧೨೪ ॥

ಇವನಿಗೆ ಯಾವನ, ರಕ್ಷಕನಾಗುವನೋ ಸ್ಥಲವಂ ಕೊಡುವನೋ ಅವನಿಗೂ, ಇದೇ ದಂಡವು. ॥ ೧೨೫ ॥

ಪರಸ್ತ್ರೀಯನ್ಯಾವನು ಬಲಾತ್ಕಾರದಿಂ ಕೆಡಿಶಿದವನೋ ಅವನಿಗೆ ವಧೆಯೇ ದಂಡವು ಹೆಂಗಸಿಗೆ ದೋಷವಿಲ್ಲ.

ಮೂರು ಮುಟ್ಟಾಗುವ ಪರ್ಯಂತ ಮದುವೆಯಿಲ್ಲದ ಕನ್ಯೆಯು ತಾನಾಗಿ ಪತಿಯಂ ವರಿಸುವಲ್ಲಿ ದಂಡ್ಯಳಾಗುವದಿಲ್ಲ. ॥ ೧೨೬ ॥

ಯಾವನು ತನ್ನ ಮಗಳನ್ನು ಸ್ವದೇಶದಲ್ಲಿ ಮದುವೆ ಮಾಡಿಕ್ಕೊಟ್ಟು ಪರದೇಶಕ್ಕೆ ಕರಕೊಂಡು ಪೋಗುವನೊ ಅವನು ವಧೆಗೆ ಯೋಗ್ಯನಾಗುವನು. ॥ ೧೨೭ ॥

ಅದ್ರವ್ಯಾಂಮೃತಪತ್ನೀಂತು ಸಂಗೃಹ್ಣನ್ನಾ ಪರಾಧ್ಯತಿ ।
ಸದ್ರವ್ಯತಾಂ ಸಂಗೃಹಿತ್ವಾ ದಂಡಂತು ಕ್ಷಿಪ್ರಮರ್ಹತಿ ॥

ಉತ್ಕೃಷ್ಟಂಯಾಭಜೇತ್ಕನ್ಯಾ ದೆಯಾತ್ತಸ್ಯೈವಸಾಭವೇತ್
ಯಂಚಾನ್ಯಂಸೇವಮಾನಾಂಚಸಂಯತಾಂವಾಸಯೇದ್ಗೃಹೆ

ಜಘನ್ಯಮುತ್ತಮಾನಾರೀಂ ಸೇವಮಾನಾತಥೈವಚ ॥ ೧೩೧
ಭರ್ತಾರಂಲಂಘಯೇದ್ಯಾಸ್ತ್ರೀ ಜ್ಞಾತಿಭಿರ್ಬಲದರ್ಪಿತಾ

ತಾಂಚನಿಷ್ಕಾಸಯೇದ್ರಾಜಾ ಸಂಸ್ಥಾನೆ ಬಹುಸಂಸ್ಥಿತೆ ।
ಕೃತಾಧಿಕಾರಾಂಮಲಿನಾಂ ಪಿಂಡಮಾತ್ರೋಪಜೀವಿನೀಂ ॥

ವಾಸಯೇತ್ಸ್ವೈರಿಣೀಂನಿತ್ಯಂ ಸವರ್ಣ್ಣನಾಭಿ ದೂಷಿತಾಂ
ಜ್ಯಾಯಸಾದೂಷಿತಾನಾರೀ ಮುಂಡನಂಸಮವಾಪ್ನುಯಾತ್

ಪತಿಹೀನಳಾಗಿ ದ್ರವ್ಯವಿಲ್ಲದ ಸ್ತ್ರೀಯಂ ಗ್ರಹಿಸಿದ ವನು ಅಪರಾಧಿಯಾಗುವದಿಲ್ಲ. ಅವಳು ದ್ರವ್ಯವಂತ ಳಾಗಿದ್ದರೆ ಅಪರಾಧಿ ಯಾಗುವನು. ॥ ೧೭೯ ॥

ಕನ್ಯೆಯು ತನಗಿಂತುತ್ತಮ ನಾದವನಂ ಹೊಂದಿದರೆ ಅವಳನ್ನವನಿಗೆ ಕೊಡಬೇಕು. ನೀಚನಂಹೊಂದುತ್ತಿದ್ದರೆ ಅವಳಂ ನಿರ್ಬಂಧಿಸಬೇಕು. ॥ ೧೩೦ ॥

ಉತ್ತಮಳಾದ ಹೆಂಗಸು ರೂಪಾದಿ ಬಲದಿಂ ಪತಿಯನ್ನುಲ್ಲಂಘಿಸಿ ನೀಚನಾದ ಪುರುಷನಂ ಪೊಂದಿದರೆ ಅವಳಂ ರಾಜನುಬಹುಜನನಿವಾಸ ಸ್ಥಾನದಲ್ಲಿ ಜ್ಞಾತಿಗಳಿಂದಿರಿಸಬೇಕು. ॥ ೧೩೧ ॥

ಯಾವಳು ಸ್ವಜಾತಿಯವರಲ್ಲೀ ಹಾದರವಂಮಾಡುತ್ತಿರುವಳೋ ಅವಳಿಗೆ ಪೂರ್ವಾಧಿಕಾರವಂ ತಪ್ಪಿಸಿ ಕೆಟ್ಟ ಬಟ್ಟೆಯನ್ನು ಹೊಟ್ಟೆಗೆ ತಕ್ಕಷ್ಟು ಆಹಾರವಂ ಕೊಟ್ಟು ಕಟ್ಟನಲ್ಲಿಟ್ಟಿರಬೇಕು. ॥ ೧೩೨ ॥

ಉತ್ತಮಜಾತಿಯವನಿಂ ದೂಷಿತಳಾದ ಸ್ತ್ರೀಗೆ ತಲೆಯಲ್ಲಿ ಹತ್ತುಪಟ್ಟೆಗಳಂತೆಗಿಸಿ ಮಲಿನ ವಸ್ತ್ರವಂಕೊಡಬೇಕು. ॥ ೧೩೪ ॥

ವಾಸಶ್ಚ ಮಲಿನಂನಿತ್ಯಂ ಶಿಖಾಂಸಂಛಾದ್ಯ ಯಾದ್ಬಕ
ಬ್ರಾಹ್ಮಣಃ ಕ್ಷತ್ರಿಯೋವೈಶ್ಯಃ ಕ್ಷತ್ರವಿಟ್ಶೂದ್ರಯೋಷಿತಃ
ಬ್ರಹ್ಮದಾಪ್ನೋ ಭವೇದ್ರಾಜಾ ದಂಡಮುತ್ತಮ ಸಾಹಸಂ

ವೈಶ್ಯಾಗಮೇಚ ವಿಪ್ರಸ್ಯ ಕ್ಷತ್ರಿಯಸ್ಯಾಂತ್ಯಜಾಂಗಮೇ । ಮ
ಧ್ಯಮಂ ಪ್ರಥಮಂ ವೈಶ್ಯೋ ದಂಡ್ಯಃ ಶೂದ್ರಾಂಗಮಾದ್ವಿಪತ್

ಶೂದ್ರಸ್ಸವರ್ಣಾಗಮನೇ ಶತಂದಂಡ್ಯೋ ಮಹೀಕ್ಷಿತಾ । ವೈ
ಶ್ಯಸ್ತು ದ್ವಿಗುಣಂ ರಾಜ್ಞ ಕ್ಷತ್ರಸ್ತು ದ್ವಿಗುಣಂ ತಥಾ । ಶೂ
ದ್ರಸ್ತ್ರೀಣಾಂ ಭವೇದ್ದಂಡ್ಯ ಸ್ತಥಾರಾಜಂಶ್ಚತುರ್ಗುಣಂ
ಅಗುಪ್ತಾ ಸುಭವೇದ್ದಂಡಃ ಋಗುಪ್ತಾ ಸ್ವಧಿಕೋಭವೇತ್ ।

ಮಾತಾಪಿತೃ ಷ್ವಸಾಶ್ವಶ್ರೂ ರ್ಮಾತುಲಾನೀ ಪಿತೃವ್ಯಜಾ
ಪಿತೃವ್ಯ ಸಖಿಶಿಷ್ಯಸ್ತ್ರೀ ಗರ್ಭಿಣೀ ತತ್ಸಖೀ ತಥಾ ॥ ೧೫

ಬ್ರಾಹ್ಮ, ಕ್ಷತ್ರ, ವೈಶ್ಯರಲ್ಲಿ ಯಾವನು ಕ್ಷತ್ರಿಯ ವೈಶ್ಯ ಶೂದ್ರಸ್ತ್ರೀಯಂ ಪೊಂದುವನೋ ಅವನಿಂದ ೧೦೮ ದುಡ್ಡುಗಳನ್ನು ಬ್ರಾಹ್ಮಣನಿಗೆ ಕೊಡಿಸಬೇಕು. ॥ ೧೩೬

ವೈಶ್ಯಸ್ತ್ರೀಗಾಮಿಯಾದ ಬ್ರಾಹ್ಮಣನಿಗೂ, ಅಂತ್ಯಜಸ್ತ್ರೀಗಾಮಿಯಾದ ಕ್ಷತ್ರಿಯನಿಗೂ, ೫೦೦ ದುಡ್ಡು ದಂಡವು. ಶೂದ್ರಸ್ತ್ರೀಗಾಮಿಯಾದ ವೈಶ್ಯನಿಗೆ ೨೦೦ ದುಡ್ಡು ದಂಡವು. ॥ ೧೩೭ ॥

ಸ್ವಜಾತಿಸ್ತ್ರೀಯಂ ಪೊಂದಿದ ಶೂದ್ರನಿಗೆ ೧೦೦ ದುಡ್ಡು ಇಂಥಾ ವೈಶ್ಯನಿಗೆ ೨೦೦ ಕ್ಷತ್ರಿಯನಿಗೆ ೩೦೦ ಬ್ರಾಹ್ಮಣನಿಗೆ ೫೦೦ ದುಡ್ಡು ಸಹ ದಂಡವು. ಅವಳಿಗೆ ಪತಿಯು ಯಥಾಶಕ್ತಿ ಅನ್ನ ಬಟ್ಟೆಗಳಂ ಕೊಡದಿದ್ದರೆ ಪೂರ್ವೋಕ್ತ ದಂಡವು ಕೊಡುತ್ತಿದ್ದರೆ ದ್ವಿಗುಣದಂಡವು. ॥ ೧೩೮ ॥

ತಾಯಿ, ತಂದೆಯ ಅಕ್ಕ ತಂಗಿಯರು, ಅತ್ತೆ, ಸೋದರತ್ತೆ ಪಿತೃವ್ಯಕನ್ಯಾ, ಪಿತೃವ್ಯ ಮಿತ್ರಶಿಷ್ಯ ಪತ್ನಿಯರು ಸಾಕ್ಷಾತ್ತಾಯಿ, ಇವಳಿಗೆ ಸರಿಯಾದಸ್ತ್ರೀ, ಯಿವರೊಡನೆ

ಭ್ರಾತೃಭಾರ್ಯ್ಯಾಸಮಪೂರ್ಣ್ಯಾ ದಂಡಸ್ತು ದ್ವಿಗುಣೋಭವೇತ್

ಚಂಡಾಲೀಂಚಶ್ವಪಾಕೀಂಚ ಗಚ್ಛನ್ವಧಮವಾಪ್ನುಯಾತ್
ತಿರ್ಯ್ಯಗ್ಯೋನಿಂಚಗೋವರ್ಜ್ಯಂ ಮೈಥುನಂಯೋನಿಷೇವತೇ ।
ವಷನಂಪ್ರಾಪ್ನುಯಾದ್ದಂಡಂ ತಸ್ಯಾಶ್ಚ ಯವಶಾದಿಕಃ ॥

ಸುವರ್ಣಂಚಭವೇ ದ್ದಂಡ್ಯೋ ಗಾಂವ್ರಜನ್ಮನುಜೋತ್ತಮ
ವೇಶ್ಯಾಗಾಮಿದ್ವಿಜೋದಂಡ್ಯೋ ವೇಶ್ಯಾಶುಲ್ಕಸಮಂಪಣಂ ॥

ಗೃಹೀತ್ವಾವೇತನಂವೇಶ್ಯಾಲೋಭಾದನ್ಯತ್ರಗಚ್ಛತಿ ।
ವೇತನಂದ್ವಿಗುಣಂದಂಡ್ಯಾ ದ್ದಂಡಂಚ ದ್ವಿಗುಣಂ ತಥಾ ॥

ಅನ್ಯಮುದ್ದಿಶ್ಯ ಯೋವೇಶ್ಯಾಂ ನಯೇದನ್ಯಸ್ಯ ಕಾರಣಾತ್ ।
ತಸ್ಯದಂಡೋ ಭವೇದ್ರಾಜನ್ ಸುವರ್ಣಸ್ಯಚ ಮಾಷಕ

ಸೇರಿದವನಿಗೆ ಭ್ರಾತೃಭಾರ್ಯಾ ಗಮನಕ್ಕೆ ಪೇಳಿದ ದಂಡಕ್ಕೆ ದ್ವಿಗುಣದಂಡವು. ॥ ೧೩೯ ॥

ಚಂಡಾಲಿ ಯನ್ನು, ನಾಯಿ ಮಾಂಸವಂ ತಿನ್ನುವಳನ್ನೂ ಹೊಂದಿದರೆ ವಧೆಯೇ ದಂಡವು. ಗೋವಂ ಹೊರ್ತು ಇತರ ತಿರ್ಯಗ್ಯೋನಿಗಳಂ ಪೊಂದುವನಿಗೆ ಮುಂಡನವು. ಆ ಪ್ರಾಣಿಗಳಿಗೆ ಗ್ರಾಸವಂ ಹಾಕುವದು ಸಹ ದಂಡವು. ॥ ೪೦

ಗೋವಂ ಪೊಂದಿದವನಿಗೆ ೨೦ ಹಣತೂಕ ಚಿನ್ನವು ದಂಡವು. ವೇಶ್ಯಾಗಾಮಿಯಾದ ಬ್ರಾಹ್ಮಣನಿಗೆ ವೇಶ್ಯೆಗೆಕೊಡತಕ್ಕಷ್ಟುಹಣದಂಡವು. ॥ ೧೪೨ ॥

ಮೊದಲು ಪ್ರೊಬ್ಬನಲ್ಲಿ ಹಣವಂ ಗ್ರಹಿಸಿ ಲೋಭದಿಂ ಮತ್ತೊಬ್ಬನಂಪೊಂದುವ ಸೂಳೆಯು ತಾನು ತಕ್ಕೊಂಡಿದ್ದ ಹಣಕ್ಕೆದ್ವಿಗುಣವಾಗಿ ಹಣವಂ ಕೊಟ್ಟಿದ್ದ ವನಿಗೂ, ಅರಮನೆಗೂಸಹಕೊಡತಕ್ಕದ್ದು ॥ ೧೪೩ ॥

ಒಬ್ಬನಿ ಗೋಸುಗ ಕರೆತಂದ ಸೂಳೆಯಂ ಮತ್ತೊಬ್ಬನಿಗೆ ಯಾವದೊತನು ಸೇರಿಸುವನೊ ಅವನಿಗೆ ಮಾಷತೂಕಚಿನ್ನವ್ರದಂಡವು. ॥ ೧೪೪ ॥

ನಿತ್ಯಾಭೋಗಾನ್ನ ಯೋದದ್ಯಾ ದ್ದಾಪ್ಯೋದ್ವಿಗುಣವೇತನಂ
ರಾಜ್ಞಸ್ತು ದ್ವಿಗುಣಂದಂಡಂ ತಥಾಧರ್ಮ್ಮೋ ನಹೀಯತೇ ॥

ಬಹೂನಾಂ ವ್ರಜತಾಮೇಕಾಂ ನಷ್ಟೇತದ್ವಿಗುಣಂ ದಮಃ ॥
ದದ್ಯುಃಪೃಥಕ್ಪೃಥಕ್ಸರ್ವೇ ದಂಡಂಚದ್ವಿಗುಣಂಪರಂ ॥ ೪೬

ನಮಾತಾ ನಪಿತಾನಸ್ತ್ರೀ ನಪುತ್ರಸ್ತ್ಯಾಜ್ಯಮಾನವಾಃ
ಅನ್ಯೋನ್ಯಂ ಪತಿತಾಸ್ತ್ಯಾಜ್ಯಾ ಯೋಗದಂಡ್ಯಃಶತಾನಿಷಟ್

ಪತಿತಾಗುರವಸ್ತ್ಯಾಜ್ಯಾ ನತುಮಾತಾಕಥಂಚನ ॥ ಗರ್ಭ
ಧಾರಣಪೋಷಾಭ್ಯಾಂ ತೇನಮಾತಾ ಗರೀಯಸೀ ॥ ೪೭

ಭೋಗಕ್ಕೊಸುಗಸೂಳೆಯೊಂಕರದುಕೊಂಡ ಪ್ರೋಗಿ ಭೋಗವನ್ನಾಗಲೀ ಭೋಗಾನಂತರ ಹಣವನ್ನಾಗಲೀ ಯಾವನು ಕೊಡದಿರುವನೊ ಅವನಿಂದವಳಿಗೆ ದ್ವಿಗುಣಪಣವ್ಯಂ ಕೊಡಿಸುವದಲ್ಲದೆ ಅದೇ ಪ್ರಕಾರ ಅರಮನೆಗೂ ಗ್ರಹಿಂಸಬೇಕು. ॥ ೧೪೪ ॥

ಒಬ್ಬ ಸೂಳೆಯು ನ್ನನೇಕ ಜನ ಭೋಗುತ್ತಿದ್ದರೆ ಅವರೆಲ್ಲರಿಂದಲೂ ವೇಶ್ಯಾಪಣಕ್ಕೆ ದ್ವಿಗುಣ ದಂಡವ ಗ್ರಹಿಸಬೇಕು. ಆ ಜನಗಳು ಅಶಕ್ತರಾದರೆ ಅವರೆಲ್ಲರನ್ನೂ ಕೇರಿಸಿ ದ್ವಿಗುಣದಂಡವಂ ಗ್ರಹಿಸಬೇಕು. ॥ ೧೪೬ ॥

ಮಾತೃ, ಪಿತೃ, ಸ್ತ್ರೀ, ಋತ್ವಿಕ್ಕು, ಯಜ್ಞಕರ್ತೃಗಳು ಸಹ ಪತಿತರಾದರೆ ಸ್ವಕೀಯರಲ್ಲವೆಂದು ತ್ಯಜಿಸತಕದ್ದು ಪುನಃ ಅವರೊಡನೆ ಕೇರಿದರೆ ೬೦೦ ದುಡ್ಡುದಂಡವು. ॥ ೧೪೭ ॥

ಗರ್ಭಧಾರಣ ಪೋಷಣಗಳಿಂ ಮಾತೃವಧಿಕವಾದ್ದರಿಂದವಳನ್ನು ಮಾತ್ರ ಬಿಡಕೂಡದು. ಇತರರಾದ ಗುರುಗಳು ಯಾರಾದರು ಪತಿತರಾದರೆ ತ್ಯಜಿಸಬೇಕು. ॥ ೧೪೮

ಅಧೀಯಾನೋಽಪ್ಯನಧ್ಯಾಯೇ ದಂಡ್ಯಃ ಕಾರ್ಷಾಪಣತ್ರಯಂ
ಅಧ್ಯಾಪಕಶ್ಚ ದ್ವಿಗುಣಂ ತಥಾಚಾರಸ್ಯ ಲಂಘನೇ । ೧೪೮ ।
ಅನುಕ್ತಸ್ಯ ಭವೇದ್ದಂಡಃ ಸುವರ್ಣಸ್ಯ ಚ ಕೃಷ್ಣಲಂ ।

ಭಾರ್ಯಾಪುತ್ರಶ್ಚ ದಾಸಶ್ಚ ಶಿಷ್ಯೋ ಭ್ರಾತಾಚ ಸೋದರಃ ।
ಕೃತಾಪರಾಧಾಃ ಸ್ತಾಡ್ಯಾಸ್ಸ್ಯು ರಜ್ಜ್ವಾ ವೇಣುದಳೇನ ವಾ
ಪೃಷ್ಠತಸ್ತು ಶರೀರಸ್ಯ ನೋತ್ತಮಾಂಗಂ ಕಥಂಚನ । ೪೯
ಅತೋನ್ಯಥಾ ಪ್ರಹರತಃ ಪ್ರಾಪ್ತಸ್ಸ್ಯಾಚ್ಚೋರಕಿಲ್ಬಿಷಂ ।

ದ್ಯೂತಂ ಸಮಾಹ್ವಯಂಶ್ಚೈವ ಯೋ ನಿಷಿದ್ಧಂ ಸಮಾಚರೇತ್
ಅಚ್ಛನ್ನಂ ವಾ ಪ್ರಕಾಶಂ ವಾ ಸ ದಂಡ್ಯಃ ಪಾರ್ಥಿವೇಚ್ಛಯಾ ।

ವಾಸಾಂಸಿ ಫಲಕೈಶ್ಲಕ್ಷ್ಣೈರ್ನಿರ್ಣಿಜ್ಯಾದ್ರಜಕಶ್ಶನೈಃ
ಅತೋನ್ಯಥಾ ಹಿ ಕುರ್ವಂಸ್ತು ದಂಡ್ಯಸ್ಸ್ಯಾದ್ರುಕ್ಮಮಾಷಕಂ

ಅನಧ್ಯಯನದ ಲ್ಲಧ್ಯಯನವಂ ಮಾಡುವವನಿಗೆ ರೂಪಾಯಾಗಲೀ ತಿಬಾವಲಿಯಾಗಲೀ ದಂಡವು. ಅಧ್ಯಯನವಂ ಪೇಳುವ ನಾಚಾರತಪ್ಪಿ ನಡೆದರೆ ಇದಕ್ಕೆ ದ್ವಿಗುಣ ದಂಡವು ಅನುಕ್ತ ವಿಯದಲ್ಲಿ ೩ ಗುಂಜಾ ತೂಕ ಸುವರ್ಣ ದಂಡವು. ॥ ೧೪೯ ॥

ಹೆಂಡತಿ, ಮಗ, ದಾಸ, ಶಿಷ್ಯ ಸಹೋದರ ಇವರು ಅಪರಾಧ ಗಳಾದರೆ ಹಗ್ಗದಿಂದ ಲಾಗಲೀ ಬಿದರ ನಿಂದ ಲಾಗಲಿ ಬೆನ್ನ ಮೇಲೆ ಹೊಡೆಯಬೇಕು. ಹ್ಯಾಗಾದರೂ ತಲೆಯಮೆಲೆ ಹೊಡೆಯಲಾಗದು ಅನ್ಯಥಾ ನಡದವನಿಗೆ ಚೌರ್ಯದೋಷಬರುವದು. ॥ ೧೫೦ ॥

ತನ್ನಂಕರೆಯಲು ಬಂಗದೊತಿಯನ್ನು ಯಾವನುಕೆಡಿಸುವನೊ ಅವನಂ ರಾಜನು ಯಥೇಚ್ಛವಾಗಿ ದಂಡಿಸ ತಕ್ಕದ್ದು ॥ ೧೫೩ ॥

ಆಗಸನು ನುಣ್ಣಗಿರುವ ಹಲಗೆ ಗಲ್ಲುಗಳಲ್ಲಿ ನಿಮ್ಮನೆವಸ್ತ್ರಗಳಂ ತೊಳೆಯಬೇಕು. ಇದಕ್ಕನ್ಯಥಾ ಮಾಡುವವನಿಗೆ ವೊಂದು ಮಾಷತೂಕಸುವರ್ಣವು ದಂಡವು ॥ ೩೪

ರಕ್ಷಾಂಸ್ಯಪಿ ಘ್ನಂತ್ಯೈತೈಸ್ತೈರ್ವ ಪ್ರದೇಶಾಯೇಕರ್ದ್ವಿಪ್ರಾಪ್ಯತೇ ॥ ೧೫೪
ಕಷ್ಟಕೇಭ್ಯೋರ್ಥಮಾದಾಯ ಯಃಕುರ್ಯಾಶ್ಚರಮನ್ಯಥಾ
ತಸ್ಯಸರ್ವಸ್ವಮಾದಾಯ ತಂರಾಜಾಪ್ರವಾಸಯೇತ್ ॥ ೫೫

ಯೆ ನಿಯುಕ್ತಾಃಸ್ವಕಾರ್ಯೇಷು ಹನ್ಯುಃಕಾರ್ಯಾಣಿಕಾರ್ಯಿಣಾಂ
ನಿರ್ಘೃಣಾಃ ಕ್ರೂರಮನಸಃ ಸರ್ವೇಕರಸ್ತ್ರ ಪರಾಧಿನಃ ॥
ಧನೋಷ್ಮಣಾಪಚ್ಯಮಾನಾ ಸ್ತಾನ್ನಿಸ್ವಾನ್ಕಾರಯೇನ್ನೃಪ
ಕೂಟಶಾಸನಕರ್ತ್ರಾಂಶ್ಚ ಪ್ರಕೃತೀನಾಂಚ ದೂಷಕಾನ್

ಸ್ತ್ರೀಬಾಲ ಬ್ರಾಹ್ಮಣಘ್ನಾಂಶ್ಚ ವಧ್ಯಾದ್ವಿಟ್ಸೇವಿನಸ್ತಥಾ
ಅಮಾತ್ಯಃಪ್ರಾಡ್ವಿವಾಕೋವಾ ಯಃಕುರ್ಯಾತ್ಕಾರ್ಯಮನ್ಯಥಾ
ತಸ್ಯಸರ್ವಸ್ವ ಮಾದಾಯ ತಂರಾಜಾ ವಿಪ್ರವಾಸಯೇತ್

ಪ್ರಜಾರಕ್ಷಣೆಯಲ್ಲಧಿಕಾರಿಗಳು ರೈತರಿಂದ ಹಣ ವಂತೆ ಗಡುಕೊಂಡು ಕೇದಾಯವಂ ಪ್ರಕಾರಾಂತರವಾಗಿ ಮಾಡಿದರೆ ರಾಜನವರ ಸರ್ವಸ್ವವಂ ಗ್ರಹಿಸಿ ರಾಷ್ಟ್ರದಿಂ ಹೊರಡಿಸಬೇಕು. ॥ ೧೫೬ ॥

ತನ್ನ ಕೆಲಸದಲ್ಲಿಟ್ಟ ಜನಗಳು ಯಾರು ದಯವಿಲ್ಲ ದೆ ಕಠಿನವಾದ ಮನವುಳ್ಳವರಾಗಿ ಕಾರ್ಯವಂ ಮಾಡುವರಕೆ ಲಸಗಳಂ ಕೆಡಿಸುವರೊ ಹಣದಆಸೆಯಿಂ ಅಪಿಸುವ ಆಜನ ಗಳನ್ನು ಕಪಟವಿಂ ದಾಜ್ಞಾಪಿಸುತ್ತಾ ಪ್ರಜೆಗಳಿಗೆ ವಿರೋ ಧವಂ ಮಾಡುವರನ್ನು ರಾಜನು ನಿರ್ಧನರನ್ನಾಗಿ ಮಾಡ ಬೇಕು. ॥ ೧೫೭ ॥

ಸ್ತ್ರೀಬಾಲಕಬ್ರಾಹ್ಮಣಹತ್ಯೆಯಂ ಮಾಡುವನು ಶತ್ರುವಂ ಸೇವಿಸುವನು ಸಹವರ್ತ್ಯನು. ಮಂತ್ರಿಯಾಗಲೀ ನ್ಯಾಯಾಧಿಕಾರಿಯಾಗಲೀ ತನ್ನ ಕಾರ್ಯಕ್ಕೆ ಯಾವನು ವಿ ರೋಧವಂ ಮಾಡುವನೊ ರಾಜನವನಸರ್ವಸ್ವವಂ ಗ್ರಹಿಸಿದೇ ಶದಿಂ ಹೊರಡಿಸಬೇಕು. ॥ ೧೫೮ ॥

ಬ್ರಹ್ಮಘ್ನಶ್ಚ ಸುರಾಪಶ್ಚ ತಸ್ಕರೋಗುರುತಲ್ಪಗಃ । ೧೫೯ ।
ಏತಾನ್ಸರ್ವಾನ್ಪೃಥಕ್ಹಿಂಸ್ಯಾತ್ ಮಹಾಪಾತಕಿನೋನರಾನ್

ಮಹಾಪಾತಕಿನೋ ವಧ್ಯಾ ಬ್ರಾಹ್ಮಣಂತು ವಿವಾಸಯೇತ್
ಕೃತಚಿಹ್ನಂ ಸ್ವದೇಶಾಚ್ಚ ಶ್ರುಣುಚಿಹ್ನಂ ಕಿತಂತತಃ

ಗುರುತಲ್ಪೇ ಭಗಃಕಾರ್ಯಃ ಸುರಾಪಾನೇ ಸುರಾಧ್ವಜಃ ।
ಸ್ತೇನೇತು ಶ್ವಪದಂತದ್ವತ್ ಬ್ರಾಹ್ಮಣಸ್ಯ ಶಿರಃ ಪುಮಾನ್ ।

ಅಸಂಭಾಷ್ಯಾಹ್ಯಸಂಭೋಜ್ಯಾ ಅಸಂವಾಹ್ಯಾವಿಶೇಷತಃ ।
ತ್ಯಕ್ತವ್ಯಾಶ್ಚ ತಥಾರಾಜನ್ ಜ್ಞಾತಿಸಂಬಂಧಿಬಾಂಧವೈಃ ।

ಮಹಾಪಾತಕಿನೋವಿತ್ತ ಮಾದಾಯನೃಪತಿಸ್ಸ್ವಯಂ । ೧೬೩
ಅಪ್ಸುಪ್ರವೇಶಯೆ ದ್ದಂಡಂ ವರುಣಾಯೋಪ ಪಾದಯೇತ್

ಬ್ರಹ್ಮಘ್ನ, ಸುರಾಪಾಯಿ, ಕಳ್ಳ, ಗುರುದಾರಾಗಾಮಿ ಯೆಂಬ ಮಹಾಪಾತಕಿಗಳನ್ನು ಬೇರೆಬೇರೆ ಯಾಗಿ ರಾಯನು ಶಿಕ್ಷಿಸಬೇಕು ॥ ೧೪೯ ॥

ಈ ಮಹಾ ಪಾತಕಿಗಳನ್ನು ರಾಜನು ವಧಿಸಬೇಕು ಬ್ರಾಹ್ಮಣನಿಂ ದಾಪಾತಕಿ ಯಾಗಿದ್ದರೆ ಅವನಿಗೆ ಪಾತಕದ ಚಿಹ್ನೆಯಂ ಮಾಡಿ ರಾಜ್ಯದಿಂ ಹೊರಡಿಸ ಬೇಕು. ॥ ೧೫೦

ಪಾತಕದ ಚಿಹ್ನೆ ಯೆಂತೆಂದರೆ ಗುರುದಾರಾಗಾಮಿಗೆ ಕೆನ್ನೆಯಮೇಲೆ ಭಗವು, ಸುರಾಪಾಯಿಗೆ ಧ್ವಜವು, ಸ್ವರ್ಣಸ್ತೇಯಿಗೆ ನಾಯಿ ಕಾಲು ಬ್ರಹ್ಮಘ್ನನಿಗೆ ತಲೆಯಿಲ್ಲದ ಮನುಷ್ಯನ ಶರೀರವು. ॥ ೧೫೧ ॥

ಮಹಾ ಪಾತಕಿ ಯೊಡನೆ ಸಂಬಂಧ ಜನಗಳೂ ಕೂಡ ಸಂಭಾಷಣ ಭೋಜನಗಳಂ ಮಾಡಲಾಗದು, ಸತ್ತರವನ ಶವವಂ ಹೊರಲಾಗದು. ॥ ೧೫೨ ॥

ಮಹಾ ಪಾಪಿಯ ದಂಡ ಧನವಂ ರಾಜನು ನೀರಿಗೆ ಹಾಕಿ ವರುಣನಿಗೆ ಸಮರ್ಪಿಸಬೇಕು. ॥ ೧೫೩ ॥

ಸಹೋಢಾನವಿನಾಚೋರಂ ಘಾತಯೇದ್ಧಾರ್ಮಿಕೋನೃಪಃ ।
ಸಹೋಢಂ ಸೋಪಕರಣಂ ಘಾತಯೇದವಿಚಾರಯನ್ ॥

ಗ್ರಾಮೇಷ್ವಪಿಚಯೇಕೇಚಿತ್‌ಚೋರಾಣಾಂಭಕ್ಷ್ಯದಾಯಕಾಃ
ಭಾಂಡಾವಕಾಶದಾಶ್ಚೈವ ಸರ್ವಾಂಸ್ತಾ ನಪಿಘಾತಯೇತ್
ರಾಷ್ಟ್ರೇಷುರಾಜ್ಞಾಧಿಕೃತಾಸ್ಸಾಮಂತಾಶ್ಚೈವದೋಷಕಾಃ
ಅಭ್ಯಾಗಾತೇಷುಮಧ್ಯಸ್ಥಾಃ ಕ್ಷಿಪ್ರಂಶಾಸ್ಯಾಸ್ತುಚೋರವತ್

ಗ್ರಾಮಘಾತೇಹಿತಾಭಂಗೇ ಪಥಿಮೋಷಾಭಿದರ್ಶನೇ ॥ ೧೬೨
ಶಕ್ತಿತೋನಾಭಿ ಧಾವಂತೋ ನಿರ್ವಾಸ್ಯಾಃ ಸಪರಿಚ್ಛದಾಃ ।

ರಾಜ್ಞಃಕೋಶಾಪಹರ್ತೄಂಶ್ಚ ಪ್ರತಿಕೂಲೇಷುಸಂಸ್ಥಿತಾನ್ ।
ಅರೀಣಾಮುಪಜ ಪ್ತೄಂಶ್ಚ ಘಾತಯೇ ದ್ವಿವಿಧೈರ್ವಧೈಃ ॥

ಸ್ವರ್ಣ ಸ್ತೇನನನ್ನು ಅವನ ಸಹಾಯರಾದ ಶಸ ಧಾರಿಗಳಂ ಸಹ ವಧಿಸಬೇಕು. ಸಂಗಡತಪ್ಪಾರ ವಾಹಿಯಾಗಿ ಬಂದವರಂ ವಧಿಶಲಾಗದು. ॥ ೧೬೪ ॥

ಗ್ರಾಮಗಳಲ್ಲಿ ಕಳ್ಳರಿಗೆ ಭಕ್ಷ್ಯ, ಭಾಂಡ, ಸ್ಥಳಗಳಂ ಕೊಟ್ಟವರನ್ನೂ ಕೊಲ್ಲಬೇಕು ॥ ೧೬೫ ॥

ರಾಷ್ಟ್ರದಲ್ಲಧಿಕಾರಿಗಳಾದವರು ರಾಜ ದ್ರೋಹಕರಾಗಿ ಪ್ರಜೆಗಳಂ ಭಾಧಿಸುವಲ್ಲಿ ಅವರನ್ನು ಆ ವಿಷಯದೋಳ್ತಟಸ್ಥರಾಗಿರುವ ಪಾಳ್ಯಗಾರರಂ ಸಹ ಸಾರ್ವಭೌಮನು ಕಳ್ಳರವೋಲ್ ಶಿಕ್ಷಿಸಬೇಕು. ॥ ೧೬೬ ॥

ದುರ್ಜನರು ಗ್ರಾಮಾಂತಗಳನ್ನೂ ಮಾರ್ಗಸ್ಥರನ್ನೂ ಬಾಧಿಸುವಲ್ಲಿ ಯಾವ ಅಧಿಕಾರಿಗಳು ಯಥಾಶಕ್ತಿಯಾಗಿ ಆ ಕಳ್ಳರನಿಗ್ರಹಕ್ಕೆ ಯಾರು ಪೋಗುವದಿಲ್ಲವೊ ಆ ಅಧಿಕಾರಿಗಳಂ ಸಪರಿವಾರವಾಗಿ ರಾಜ್ಯದಿಂ ಹೊರಡಿಸಬೇಕು

ಜೊಕ್ಕಸದ ಕಳ್ಳರನ್ನೂ ಪ್ರತಿಕೂಲವಾದ ಕಾರದಲ್ಲಿರುವವರನ್ನು ಶತ್ರುಗಳಿಂದ ಲಂಚವಂ ಗ್ರಹಿಂಸುವರನ್ನೂ ಕೂಡ ನಾನಾಪ್ರಕಾರವಾಗಿ ಹೊರಡಿಸಬೇಕು. ॥ ೧೬೭

ಸಂಧಿಂಕೃತ್ವಾಽಶುಯೇಚೌರ್ಯಂ ರಾತ್ರೌಕುರ್ವಂತಿತಸ್ಕರಾಃ
ತೇಷಾಂಛಿತ್ವಾ ನೃಪೋಽಹಸ್ತೌ ತೀಕ್ಷ್ಣಶೂಲೇನಿವೇಶಯೇತ್

ತಟಾಕಭೇದಕಂಹನ್ಯಾ ದಪ್ಸುಶುದ್ಧವಧೇನತು ॥ ೨೦ ॥

ಯಸ್ತುಪೂರ್ವಂನಿವಿಷ್ಟಂಸ್ಯಾ ತ್ತಟಾಕಸ್ಯೋದಕಂಹರೇತ್ ॥
ಆಗಮಂಚಾಪ್ಯಪಾಂಭಿಂದ್ಯಾ ತ್ಸದಾಪ್ಯಃಪೂರ್ವಶಾಸನಂ ॥

ಕೋಷ್ಠಾಗಾರಾಯುಧಾಗಾರ ದೇವಾಗಾರವಿಭೇದಕಾನ್ ॥
ಪಾಷಾಣಪಾಪಸಮಾಚಾರಾನ್ಘಾತಯೇಚ್ಛೀಘ್ರಮೇವಚ ॥
ಸಮುತ್ಸೃಜೇದ್ರಾಜಮಾರ್ಗೇ ಯಸ್ತ್ವಮೇಧ್ಯಮನಾಪದಿ
ಸಹಿಂಕಾರ್ಷಾಯಣಂದಂಡ್ಯ ಸ್ತತ್ವಮೇಧ್ಯಂಚಶೋಧಯೇತ್

ಅಜಂಗಮೋಽಥವಾವೃದ್ಧೋ ಗರ್ಭಿಣೀಬಾಲಏವವಾ ॥ ಪರಿ
ಭಾಷಣ ಮರ್ಹಂತಿ ನಚಶೋ ಧ್ಯಮಿತಿಸ್ಥಿತಿಃ ॥ ೨೪ ॥

ಯಾರು ಸಂಕೇತವಂ ಮಾಡಿಕೊಂಡು ರಾತ್ರಿ ಕಳ್ಳತನವಂ ಮಾಡುವರೊ ಅವರ ಕೈಗಳಂ ಕತ್ತರಿಸಿ ಶೂಲಕ್ಕೆ ಹಾಕಿಸಬೇಕು. ॥ ೬೯ ॥

ಯಾವನು ಕೊಳವಂ ಕೀಳುವನೊ ಅವನಂ ನೀರಿನಲ್ಲಿ ಮುಳುಗಿಸಿ ವಧಿಸಬೇಕು. ॥ ೧೭೦ ॥

ಕೊಳದಲ್ಲಿ ತಡವಿದ್ದ ಜಲವಂ ಕಳುವನಿಗೂ ನೀರು ಬರುವ ಕಾಲವೆಯಂ ಮುರಿಯುವನಿಗೂ ಪೂರ್ವದಲ್ಲಿ ಪೇಳಿದ್ದೇ ದಂಡವು. ॥ ೧೭೧ ॥

ಪಾತ್ರಮನೆ ಶಸ್ತ್ರಶಾಲೆ ದೇವಸ್ಥಾನಗಳಂ ಮುರಿಯುವ ಕೆಟ್ಟನಡತೆಯುವರನ್ನು ಶೀಘ್ರವಾಗಿಯೆ ಹೊರಡಿಸಬೇಕು

ರಾಜರ ಮಾರ್ಗದಲ್ಲಿ ಯಾವನು ರೋಗಿಯಲ್ಲದೆ ವಿಷ್ಟಿಸುವನೊ ಅವನಿಗೆ ಒಂದು ರೂಪಾಯಾಗಲೀ ಪಾವಲಿಯಾಗಲೀ ದಂಡವು. ಮತ್ತು ಮಾಅಮೇಧ್ಯವಂತೆಗಸತಕ್ಕದ್ದು

ನಡೆಯಲುಶಕ್ತಿ ಯಿಲ್ಲದವನು ಅತಿವೃದ್ಧ ಪೂರ್ಣಗರ್ಭಿಣೀ ಬಾಲಕ ಇವರುಗಳು ರಾಜಮಾರ್ಗದಲ್ಲಿ ಕೆಡಿಸಿದರೆ ನಿಷ್ಠುರಭಾಷೆಯೇ ದಂಡವು. ॥ ೧೭೪ ॥

ಪ್ರಥಮಂಸಾಹಸಂದಂಡ್ಯೋ ಯಶ್ಚಮಿಥ್ಯಾ ಚಿಕಿತ್ಸತಿ । ಪ್ರ
ರುಷೇಮಧ್ಯಮಂದಂಡ ಮುತ್ತಮಂಚತಥೋತ್ತಮೇ ॥ ೭೪ ॥

ಛತ್ರಸ್ಯಧ್ವಜ ಯಷ್ಟೀನಾಂ ಪ್ರತಿಮಾನಾಂ ಚಭೇದಕಾಃ ।
ಪ್ರತಿ ಕುರ್ಯಾಚ್ಚತಸರ್ವಂ ಪಂಚದದ್ಯಾಚ್ಛತಾನಿಚ ॥ ೭೬ ॥

ಅದೂಷಿತಾನಾಂ ದ್ರವ್ಯಾಣಾಂ ದೂಷಣೇ ಭೇದನೇತಥಾ ।
ಮಣೀನಾಮಪಿಭೇದೇನ ದಂಡ್ಯಃಪ್ರಥಮಸಾಹಸಂ ॥ ೭೭ ॥

ಸಮಂ ಚ ವಿಷಮಂಚ್ಛೈವ ಕುರುತೇ ಮೂಲ್ಯತೋಽಪಿವಾ ।
ಸಮಾಪ್ನುಯಾತ್ಸವೈಪೂರ್ವಂ ದಮಂಮಧ್ಯಮಮೇವಚ ।

ಬಂಧನಾನಿ ಚ ಸರ್ವಾಣಿ ರಾಜಮಾರ್ಗೇ ನಿವೇಶಯೇತ್ ।

ವೈದ್ಯನು ಸರಿಯಾಗಿ ರೋಗವಂ ಪರೀಕ್ಷಿಸಿ ಚಿಕಿತ್ಸೆಯಂ ಮಾಡದಿದ್ದರೆ ೨೫೦ ಸಾಧಾರಣ ಪುರುಷನ ರೋಗಪರೀಕ್ಷೆಯಲ್ಲಿ ಭಯಂಕರ ವಾಗಿ ಪೇಳಿದರೆ ೫೦೦ ಉತ್ತಮ ಪುರುಷವಿಷಯದೊ ಳೀರೀತಿ ಯಾಗಿ ಪೇಳಿದರೆ ೧೦೮೦ ದುಡ್ಡು ದಂಡವು. ॥ ೧೩೫ ॥

ರಾಜನ ಛತ್ರ ಧ್ವಜ ದಂಡ ಗಳನ್ನು ದೇವತಾಪ್ರತಿಮೆಗಳನ್ನು ಯಾರು ಮುರಿಯು ವರೊ ಅಥವಾ ಅವುಗಳಿಗೆ ವಿರೋಧವಂ ಮಾಡುವರೊ ಅವ ರೆಲ್ಲರಿಗೂ ೫೦೦ ದುಡ್ಡು ದಂಡವು. ॥ ೧೩೬ ॥

ಉತ್ತಮ ಪದಾರ್ಥಗಳಂ ದೂಷಿಸಿದರೂ ಮಣಿಗಳಂ ಪ್ರೊಡದರು ೨೫೦ ದುಡ್ಡು ದಂಡವು. ಮಣಿಗಳ ಕ್ರಯವಂ ಕೊಡಗ್ರಹಿಸಬೇಕು ॥ ೧೩೭ ॥

ಸಮವಾದ ವಸ್ತು ಗಳಿಗೆ ಮೌಲ್ಯದಲ್ಲಿ ವೈಷಮ್ಯವಂ ಕಲ್ಪಿಸುವನಿಗೆ ೨೫೦ ದುಡ್ಡು ದಂಡವು. ನ್ಯೂನಾಧಿಕವಸ್ತುಗಳ ಕ್ರಯವಂ ಸಮವಾಗಿ ಕಲ್ಪಿಸುವನಿಗೆ ೪೦೦ ದುಡ್ಡುದಂಡವು ॥ ೧೩೮ ॥

ರಾಜಮಾರ್ಗದಲ್ಲಿಟ್ಟ ರಾಜ್ಯ ನಿಬಂಧನ ಪತ್ರಗಳಂ

ಕ್ಷ್ನಂತೋ ಯತ್ರ ದೃಶ್ಯಂತೇ ವಿಕೃತಾಃ ಪಾಪಕಾರಿಣಃ । ೭೯ ॥
ಪ್ರಾಕಾರಸ್ಯ ಚ ಭೇತ್ತಾರಂ ಪರಿಘಾನಾಂ ಚ ಭೇದಕಂ ॥ ದ್ವಾ
ರಾಣಾಂಚೈವ ಭೇತ್ತಾರಂ ಕ್ಷಿಪ್ರಂ ನಿರ್ವಾಸಯೇತ್ಪುರಾತ್ ॥
ಮೂಲಕರ್ಮಾಭಿಚಾರೇಷು ಕರ್ತವ್ಯೋ ದ್ವಿಶತೋ ದಮಃ ॥ ಅ
ಬೀಜ ವಿಕ್ರಯೀಯಶ್ಚ ಬೀಜೋತ್ಕರ್ಷಕ ಏವ ಚ ॥ ೮೧ ॥
ಮರ್ಯಾದಾಭೇದಕಶ್ಚಾಪಿ ವಿಕೃತಂ ಬಂಧಮಾಪ್ನುಯಾತ್ ॥

ಸರ್ವಸಂಕರ ಪಾಪಿಷ್ಠಂ ಹೇಮಕಾರಂ ನರಾಧಿಪ ॥ ೮೨ ॥
ಅನ್ಯಾಯೇ ವರ್ತಮಾನಂ ಚ ಛೇದಯೇಲ್ಲವಶಃ ಕ್ಷುರೈಃ ॥

ದ್ರವ್ಯಮಾದಾಯ ವಣಿಜಾಮನರ್ಘೇಣಾ ವರುಂಧತಾಂ
ದ್ರವ್ಯಾಣಾಂ ದೂಷಕೋ ಯಸ್ತು ಪ್ರತಿಛನ್ನಸ್ಯ ವಿಕ್ರಯೀ ।
ಮಧ್ಯಮಂ ಪ್ರಾಪ್ನುಯಾದ್ದಂಡಂ ಕೂಟಕರ್ತಾ ತಥೋತ್ತಮಂ
ರಾಜಾ ಪೃಥಕ್ಪೃಥಕ್ಕುರ್ಯಾತ್ ದಂಡಂ ಚೋತ್ತಮಸಾಹಸಃ

ಕಳೆಯ ುವವಪು ಪಿ್ಟರನ್ನು ಪ್ರಾಕಾರ ಪರಿಷಾ ದ್ವಾರ ಭೇವ ಕರನ್ನೂ ಶೀಘ್ರವಾಗಿ ನಗರದಿಂ ಹೊರಡಿಸಬೇಕು ॥ ೮೦ ॥

ವರ್ಣಾಶ್ರಮ ಮೂಲಕರ್ಮವಂ ತ್ಯಜಿಸುವನಿಗೆ ೨೦೦ ದುಡ್ಡುದಂಡವು. ಪೂರ್ವ ಸಂಕೇತ ಪ್ರಕಾರವಾಗಿ ಬೀಜವಂ ಕೊಡದಿರುವನನ್ನೂ ಹಾಕಿದ್ದ ಬೀಜವಂ ಕೀಳುವನನ್ನೂ ಲೋಕಮರ್ಯಾದೆಗಳಂ ಬೇದಿಸುವನನ್ನೂ ಭಿಕ್ಷಗವಾದೆಬಂಧನದ ಲ್ಲಿಡಬೇಕು, ॥ ೧೮೧ ॥

ಸರ್ವ ಸಂಕರ ಜಾತಿಗಳಲ್ಲ ಪಾಪಿಷ್ಠನೆನಿಸುವ ಸ್ವರ್ಣಕಾರನು ಬ್ರಾಹ್ಮಣಾದಿ ಕನಕವಂ ಕಳುವಲ್ಲಿ ಅನನಂ ರಾಜನು ಲವಪ್ರಮಾಣವಾಗಿ ಕ್ಷೌರಕರ ಶಸ್ತ್ರದಿಂ ಛೇದಿಸಬೇಕು. ॥ ೧೮೨ ॥

ಯಾವ ವ್ಯಾಪಾರಿಗಳು ಸಂಕೇತದಿಂ ಗುಪ್ತವಾಗಿ ದೇಶಾಂತರದಿಂಬಂದ ಪದಾರ್ಥವಂ ಗ್ರಹಿಸಿ ಅದೆಂಬೊಂದಕ್ಕೆ ಕೊಡದೆ ಸ್ವಲ್ಪಮೂಲ್ಯಕ್ಕೆ ಸಿಲ್ಕಿಸಿ ತಾವು ಹಂಚಿಕೊಳ್ಳುವರೊ ಯಾರು ಅದರಮೇಲೆ ದೋಷಾರೋಪಣಂ ಮಾಡುರೊ ಯಾವರು ಪದಾರ್ಥವಂ ಸ್ಪಷ್ಟವಾಗಿ ಕೊಡಿಸದೆ ಅನೇಕ ಮೂಲ್ಯಕ್ಕೆ ಕೊಡುವರೊ ಅವ ರೆಲ್ಲರಿಗೂ ೩೪೦ ದುಡ್ಡು ದಂಡವು.

ಶಾಸಾಪ್ರಾಂತಮಜ್ಞ್ನಾಶ್ವಸಾಂದೇಶಾನಾಂ ದ್ರೋಹಕೋಽರ ।
ದೇವತಾನಾಂ ಸತೀನಾಂ ಚ ಉತ್ತಮಂ ದಂಡ ಮರ್ಹತಿ ॥

ಏಕಸ್ಯದಂಡಪಾರುಷ್ಯೇ ಬಹೂನಾಂ ದ್ವಿಗುಣೋದಮಃ ॥
ಕಲಹಾಯದ್ಗ್ರತೋದಾಪ್ರೋ ಗಂಡಕ್ಟ ದ್ವಿಗುಣಾಸ್ತತಃ ॥
ಮಧ್ಯಮಂ ಬ್ರಾಹ್ಮಣಂ ರಾಜಾ ವಿಷಯಾ ದ್ವಿಪ್ರವಾಸಯೇತ್

ಲಶುನಾಂಶ್ಚ ಪಲಾಂಡುಂಚ ಸೂಕರಂ ಗ್ರಾಮಕುಕ್ಕುಟಂ ॥
ತಥಾಪಂಚನಖಂಸ ರ್ವಾಭಕ್ಷ್ಯಾದನ್ಯತ್ರ ಭಕ್ಷಯೇತ್ ॥ ೮೪
ವಿವಾಸಯೇತ್ಕ್ಷಿಪ್ರಮೇವ ಬ್ರಾಹ್ಮಣಂ ವಿಷಯಾತ್ಸ್ವಕಾತ್
ಅಭಕ್ಷ್ಯಭಕ್ಷಣೇದಂಡ್ಯಃ ಶೂದ್ರೋಭವತಿಕೃಷ್ಣಲಂ ॥ ೮೫
ಬ್ರಾಹ್ಮಣಕ್ಷತ್ರಿಯವಿಶಾಂಚತುಸ್ತ್ರಿ ದ್ವಿಗುಣಂ ದಮಂ ॥

ಯಾರು ಈ ಕೆಲಸವಂ ಕಪಟದಿಂ ಮಾಡುವರೋ ಅವರಿಗೆ
ಲ್ಲರಿಗೂ ಬೇರೆ ಬೇರೆ ೧೦೮ಂದೊಡ್ಡು ದಂಡವು, ॥ ೧೯೪ ॥

ಶಸ್ತ್ರ, ಯಜ್ಞ, ತಪಸ್ಸು, ದೇಶ, ದೇವತಾ, ಪ
ತಿವ್ರತೆಗಳಮೇಲೆ ದೋಷಾರೋಪಣಂ ಮಾಡುವನು ತೀಕ್ಷ್ಣ
ವಾದಶಿಕ್ಷೆಗೆ ಯೋಗ್ಯನು. ॥ ೧೯೫ ॥

ಯಾವ ಅಧಿಕಾರಿಯು ಬಹುಜನಗಳಿಗೆ ಉಗ್ರದಂಡ
ವಂಮಾಡುವನೋ ಅವನಿಗೆ ದ್ವಿಗುಣ ವಾದದಂಡವು ಕ
ಲಹವಂ ಮಾಡುವರಿಗೆ ಯೆಷ್ಟು ದಂಡವೋ; ಅದಕ್ಕೆ ದ್ವಿಗು
ಣವಾಗಿ ಕಲಹಕ್ಕೆ ಮೂಲ ನಾದವನಿಗೆ ದಂಡವು. ಬ್ರಾ
ಹ್ಮಣನು ಮಧ್ಯಸ್ಥನಾಗಿ ಕಲಹಸಾಧಕ ನಾಗಿದ್ದರೆ ಅ
ವನಂ ದೇಶದಿಂ ಹೊರಡಿಸಬೇಕು. ॥ ೧೯೬ ॥

ಬೆಳ್ಳುಳ್ಳೀ, ನೀರುಳ್ಳಿ, ಹಂದಿ, ಊರು ಕೋಳಿ
ಸಮಸ್ತ ಪಂಚನಖ ಪ್ರಾಣಿಗಳು ಯಿನ್ನುಮ ಭಕ್ಷ್ಯಗ
ಳಂ ತಿನ್ನುವ ಬ್ರಾಹ್ಮಣನಂ ದೇಶದಿಂ ಹೊರಡಿಸ ಬೇಕು

ಅಭಕ್ಷ್ಯನಂ ಭಕ್ಷಿಸುವ ಶೂದ್ರನಿಗೆ ಒಂದು, ವೈಶ್ಯ
ನಿಗೆ ಯರಡು ಕ್ಷತ್ರಿಯನಿಗೆ ಮೂರು ಬ್ರಾಹ್ಮಣನಿಗೆ ನಾ
ಲ್ಕು ಗುಂಜಾತೂಕ ಸುವರ್ಣ ದಂಡವು ॥ ೧೯೭ ॥

ಯಸ್ಸಾಹಸಂಕಾರಯತಿ ಸದಂಡ್ಯೋದ್ವಿಗುಣಂದಮಂ ॥
ಯಸ್ತ್ವೇವಮುಕ್ತ್ವಾಹಂದಾತಾಕಾರಯೇತ್ಸಚತುರ್ಗುಣಂ

ಸಂದಿಷ್ಟಸ್ಯಪ್ರದಾತಾಚ ಸಮುದ್ರಗೃಹಭೇದಕಃ ॥ ೯೧ ॥
ಪಂಚಾಶತ್ಪಣಿಕೋದಂಡ ಸ್ತತ್ರಕಾರ್ಯೋ ಮಹೀಕ್ಷಿತಾ

ಅಸ್ಪೃಶ್ಯಂಚಸ್ಪೃಶನ್ನಾರ್ಯೋ ಹ್ಯಯೋಗ್ಯೋಯೋಗ್ಯಕರ್ಮ
ಕೃತ್ ॥ ೯೨ ॥
ಪುಂಸ್ತ್ವಹರ್ತಾ ಪಶೂನಾಂಚ ದಾಸೀಗರ್ಭವಿನಾಶಕೃತ್ ॥
ಶೂದ್ರಪ್ರವ್ರಜಿತಾನಾಂಚ ದೈವೇಪಿತ್ರ್ಯೇಚಭೋಜಕಃ ॥ ೯೩
ಅವ್ರಜಾರ್ಘಬಂಧನಮುಕ್ತ್ವಾತು ತತ್ರೈವಚನಿಮಂತ್ರಿಣೇ ॥ ಪಿ
ತ್ರೇಕಾರ್ಷಾಪಣಶತಂ ಸರ್ವೇದಂಡ್ಯಾಮಹೀಕ್ಷಿತಾ ॥ ೯೪ ॥

ಯಾವನು ಕಳ್ಳತನವಂ ಮಾಡಿ ಸುವನೋ ಅವನಿಗೆ ಕದ್ದ ಪತಾರ್ಥದ ಮೌಲ್ಯಕ್ಕೆ ದ್ವಿಗುಣ ದಂಡವು ನಾನು ಪಣವಂ ಕೊಡುವೆ ನೆಂದು ಕದಿಸುವನಿಗೆ ಚತುರ್ಗುಣ ದಂಡವು

ವಾಚಾ ದತ್ತ ಪಾದ್ದನ್ನು ಕೈಯಿಂದ ಕೊಡದಿರುವನಿಗೂ, ಅಧಿಕಾರಿ ಯಲ್ಲದೆ ಮನೆಗೆ ಹಾಕಿದ್ದ ಮುದ್ರೆಯಂ ತೆಗಿಸುವನಿಗೂ ಷಂಟಡ್ತ ದಂಡವು, ॥ ೧೯೦ ॥

ಮುಟ್ಟಲಯೋಗ್ಯ ನಾದವನಂ ಯಾವ ಯೋಗ್ಯನು ಮುಟ್ಟುವನೋ ಯಾವನು ಅಯೋಗ್ಯ ನಾದಾಗ್ಯೂ ಯೋಗ್ಯ ಕರ್ಮವಂ ಮಾಡುವನೋ ಯಾವನು ಪಶುಗಳ ಪುಂಸತ್ವವಂ ನಿಷ್ಕಾರಣ ವಾಗಿ ತಪ್ಪಿಸುವನೋ ಯಾವನು ದಾಸಿ ಯ ಗರ್ಭಕ್ಕೆ ಹಾನಿಯಂ ಮಾಡುವನೋ ಯಾವನು ಶೂದ್ರೋಪದೇಶದಿಂ ಸನ್ಯಾಸಿ ಯಾದ ವನಿಗೆ ದೇವ ಪಿತೃ ಕರ್ಮ ಗಳಲ್ಲಿ ಭೋಜನವಂ ಮಾಡಿಸುವನೋ ಯಾವನು ನಿಮಂತ್ರಣಕ್ಕೆ ನಿಷ್ಕಾರಣ ಹೋಗದಿರುವನೋ ಇವರಿಗೆ ರಾಜನು ಬೇರೆಬೇರೆ ನೂರು ರೂಪಾಯಾಗಲೀ ನೂರು ಪಾವಲಿಯಾಗಲೀ ದಂಡವಂ ಹಾಕಬೇಕು. ॥ ೧೯೪ ॥

ದುಃಖೋತ್ಪಾದಿ ಗೃಹೇದ್ರವ್ಯಂ ಕ್ಷಿಪೇದಂಧಸ್ಯ ಕೃಷ್ಣಲಂ ॥
ಪಿತ್ರಾಪುತ್ರವಿರೋದಶ್ಚ ಸಾಕ್ಷಿಣಾಂದ್ವಿಶತೋದಮಃ ॥ ೯೫

ತುಲಾಶಾಸನಮಾನಾನಾಂ ಕೂಟಕೃನ್ನಾಣಕಸ್ಯ ಚ ॥ ಏಭಿ
ಶ್ಚ ವ್ಯವಹರಂತ್ಯಾ ಚ ಸ ದಂಡ್ಯೋ ದಮಮುತ್ತಮಂ ॥ ೧೯೬ ॥

ವಿಷಾಗ್ನಿ ದಾಂಪತಿಗುರು ನಿಜಾಪತ್ಯ ಪ್ರಮಾಪಣೀಂ ॥ ವಿಕ
ರ್ಣನಾಸಿಕಾಂ ವ್ಯೋಷ್ಠೀಂ ಕೃತ್ವಾಗೋಭಿಃ ಪ್ರಮಾಪಯೇತ್ ॥

ಖಲಸ್ಯಪಾಹಕಾಯೇಚ ಯೇಚಕ್ಷೇತ್ರಸ್ಯವೇಶ್ಮನಃ ॥ ರಾಜಪ
ತ್ನ್ಯಭಿಗಾಮೀ ಚ ದಗ್ಧವ್ಯಾಸ್ತು ಕಟಾಗ್ನಿನಾ ॥ ೧೯೭ ॥

ಯಾವನು ಕುರುಡನ ಮನೆಯಲ್ಲವನಿಗೆ ದುಃಖಕರವಾದ ಪದಾರ್ಥವನ್ನಿಡುವನೊ ಅವನಿಗೆ ಗುಂಜಾತೂಕ ಸುವರ್ಣದಂಡವು. ತಂದೆ ಮಕ್ಕಳ ವಿರೋಧದಲ್ಲಿ ಸಾಕ್ಷಿಯಾದವನಿಗೆ ೨೦೦ ದುಡ್ಡು ದಂಡವು ಯೋಗ್ಯನಾದವನು ಈ ಸಾಕ್ಷಿವಾದಕ್ಕೆ ಬಂದರೆ ೮೦೦ ದುಡ್ಡು ದಂಡವು.

ತೂಕ, ಅಳತೆಗಳಲ್ಲಿ ಕಪಟವನ್ನು ಯಾವನು ಮಾಡುವನೊ ಇವನೊಡನೆ ಸೇರಿಕೊಂಡು ಯಾವನು ವ್ಯಾಪಾರವಂ ಮಾಡುವನೊ ಅವರಿಗೆ ರಾಜನು ಅಂಗಚ್ಛೇದ ಸರ್ವಸ್ವಹರಣಾದ್ಯುಗ್ರ ದಂಡವಂ ಮಾಡಬೇಕು ॥ ೧೯೬ ॥

ವಿಷವಂ ಕೊಡುವಳನ್ನೂ ಮನೆಗೆ ಬೆಂಕಿಯಂ ಹಾಕುವಳನ್ನೂ, ನಿಜಪುತ್ರ, ಪತಿ, ಗುರುಗಳಂ ಕೊಲ್ಲುವಳನ್ನೂ ಕಿವಿ, ಮೂಗು, ತುಟಿಗಳಂ ಕುಯಿದು ಗೋವುಗಳಿಂ ಕೊಲ್ಲಿಸಬೇಕು ॥ ೧೯೭ ॥

ಕಣ ಹೊಲ ಮನೆಗಳಿಗೆ ಬೆಂಕಿಯಂಹಾಕುವವನನ್ನೂ ರಾಜಪತ್ನಿಗಾಮಿಗಳನ್ನು ಕಟಾಗ್ನಿಯಿಂ ದಹಿಸಿ ಸಂಹರಿಸಬೇಕು ॥ ೧೯೮ ॥

ಊನಂವಾಪ್ಯಧಿಕಂಚಾಪಿ ಲಿಖೇದ್ಯೋರಾಜಶಾಸನಂ ॥ ಪಾರ
ದಾರಿಕಚೌರ್ಯಂವಾ ಮುಂಚತೋದಂಡಉತ್ತಮಃ ॥ ೧೯೯ ॥

ಅಭಕ್ಷ್ಯೇಣದ್ವಿಜಂದೂಷ್ಯ ದಂಡಉತ್ತಮಸಾಹಸಃ ॥ ಕ್ಷತ್ರಿ
ಯಂಮಧ್ಯಮಂವೈಶ್ಯಂ ಪ್ರಥಮಂಶೂದ್ರಮರ್ಧಕಂ ॥ ೨೦೦

ಮೃತಾಂಗಲಗ್ನವಿಕ್ರೇತು ರ್ಗುರೋಸ್ತಾಡಯಿತುಸ್ತಥಾ ರಾಜ
ಯಾನಾಸನಾರೋಢುರ್ದಂಡ ಉತ್ತಮಸಾಹಸಃ ॥ ೨೦೧ ॥

ಯೋಮನ್ಯೇತಾ ಜಿತೋಸ್ಮೀತಿ ನ್ಯಾಯೇನಾಪಿ ಪರಾಜಿತಃ ॥
ತಮಾಯಾಂತಂಪುನರ್ಜಿತ್ವಾ ದಂಡಯೇದ್ದ್ವಿಗುಣಂದಮಂ ॥

ಆಹ್ವಾನಕಾರೀವಧ್ಯಸ್ಸ್ಯಾ ದನಾಹೂತೇತಥಾಹ್ವಯನ್ ॥
ದಾಂಡಿಕಸ್ಯಚಯೋಹಸ್ತಾದಭಿ ಯುಕ್ತಃಪಲಾಯತೇ ॥ ೨೦೨
ಹೀನಃ ಪುರುಷಕಾರೇಣ ತದ್ದದ್ಯಾ ದ್ದಾಂಡಿಕೋಧನಂ ॥

ರಾಜಾಜ್ಞೆಯಂ ಹೆಚ್ಚು ಕಡಮೆಯಾಗಿ ಬರೆಯುವನೋಂ ಅವನಿಗೆ ಅಪರಾಧ ತಾರತಮ್ಯಾನುಗುಣವಾಗಿ ರಾಜನು ಯಥೋಚಿತವಾಗಿ ಶಿಕ್ಷಿಸತಕ್ಕದ್ದು ॥ ೧೯೯ ॥

ಬ್ರಹ್ಮ, ಕ್ಷತ್ರ, ವೈಶ್ಯಶೂದ್ರರಿಗೆ ಅಭಕ್ಷ್ಯ ಭಕ್ಷಣವಂ ಮಾಡಿಸಿದವನಿಗೆ ಕ್ರಮವಾಗಿ ೧೮೦-೫೪೦-೨೭೦-೧೩೫ ದುಡ್ಡುಗಳು ದಂಡವು. ॥ ೨೦೦ ॥

ಶವಕ್ಕೆ ತಗಲಿದ್ದ ವಸ್ತ್ರಾದಿಗಳಂ ವಿಕ್ರಯಿಸುವನಿಗೂ, ಗೋವಂ ಕೊಡೆಯುವನಿಗೂ, ರಾಜ ವಾಹನವಂ ಹತ್ತುವನಿಗೂ, ಅಪರಾಧ ತಾರತಮ್ಯಾನುಗುಣವಾಗಿ ದಂಡವಂ ಮಾಡತಕ್ಕದ್ದು ॥ ೨೦೧ ॥

ವಾದಾದಿಗಳಲ್ಲಿ ಯಾವನು ಸೋತಾಗ್ಯೂ ಸೋಲಲಿಲ್ಲ ನೆನ್ನುವನೊ ಅವನನ್ನು ಪುನಃ ನ್ಯಾಯವಾಗಿ ಗೆದ್ದು ಅವನಿಂದ ಬರತಕ್ಕ ಪಣವಂ ತೆಗದು ಕೊಳ್ಳತಕ್ಕದ್ದು

ಜನಗಳಂ ಕರೆಯಲು ಕ್ಲುಪ್ತನಾದ ಪುರುಷನು ಆಜ್ಞಾಪ್ರಕಾರ ನಡೆಯದೆ ಕರೆಯಲು ಯೋಗ್ಯನಾದವನಂ ಬಿಟ್ಟು ಅಯೋಗ್ಯನಂ ಕರದಾಗ್ಯೂ ಅವನ ಕೈಯಿಂದೊಬ್ಬನು ತಪ್ಪಿಸಿಕೊಂಡು ಹೋದಾಗ್ಯೂ, ಪೌರುಷ ಹೀನನಾದ ಆಪುರು

ಪ್ರೇಷ್ಯಾಪರಾಧಾತ್ಪ್ರೇಷ್ಯಸ್ತು ಸದಂಡ್ಯಶ್ಚಾರ್ಧಮೇವಚ ॥ ೭ ॥
ದಂಡಾರ್ಧಂನಿಯಮಾರ್ಧಂಚ ಸ್ತ್ರೀಯಮಾನೇಷುಬುಧ್ಧನಂ ॥

ಯದಿಕಶ್ಚಿತ್ಪ್ರಲಾಯೇತ ದಂಡಶ್ಚಾಷ್ಟಗುಣೋಭವೇತ್ ॥

ಅನಿಂದಿತೆ ವಿವಾದೇತು ನಖರೋಮಾವ ತಾರಣಂ ॥ ಕಾರ
ಯೆದ್ಯಸ್ಸ ಪುರುಷೊ ಮಧ್ಯಮಂದಂಡಮರ್ಹತಿ ॥ ೨೦೬ ॥

ಬಂಧನಂಚಾಪ್ಯವಧ್ಯಸ್ಯ ಬಲಾನ್ಮೋಕ್ಷಂಚ ಯತ್ತೇತುಯಃ ॥
ವಧ್ಯಂವಿಮೋಚಯೆದ್ಯಸ್ತು ದಂಡಾದ್ದ್ವಿಗುಣಭಾಗ್ಭವೇತ್ ॥

ದುರ್ದೃಷ್ಟವ್ಯವಹಾರಾಣಾಂ ಸಭ್ಯಾನಾಂದ್ವಿಗುಣೋದಮಃ

ಷೆನಂ ಸ್ವ್ಯೂನ ವಾದ ಕಾರ್ಯದ ಲ್ಲಿದ ಬೇಕಾ ದ್ದಲ್ಲದೆ ಯು ತ್ಕಿಂಚಿದ್ದಂಡವನ್ನು ಗ್ರಹಿಸಬೇಕು. ॥ ೨೦೩ ॥

ಅಧಿಕಾರಿಯು ಕೈಕೆಳಗಿದ್ದ ಮತ್ತೊಬ್ಬ ಅಧಿಕಾರಿ ಯು ಮಹತ್ತಾದ ಅಪರಾಧವಂ ಮಾಡಿದರೆ ದೊಡ್ಡ ಅಧಿ ಕಾರಿಗೆ ಅರ್ಧ ವರುಷ ಅರ್ಧ ತಿಂಗಳು ಸಂಬಳವಂ ದಂ ಡವಾಗಿ ಗ್ರಹಿಸಬೇಕು. ॥ ೨೦೪ ॥

ಬಂಧನ ಗೃಹಕ್ಕೆ ಹೋಗುವ ಜನಗಳ ಲ್ಲೊಬ್ಬನು ಸಮಯದಲ್ಲಿ ತಪ್ಪಿಶಿಕೊಂಡು ಪೋದಲ್ಲಿ ಅಧಿಕಾರಿಗೆ ಅ ಷ್ಟಗುಣವಾಗಿ ದಂಡವಂ ಹಾಕಬೇಕು. ॥ ೨೦೫ ।

ವಿವಾದದಲ್ಲಿ ಸತ್ಯವಾಗಿದ್ದವನಿಗೆ ಯಾವನು ಮುಂ ಡನರೂಪ ಶಿಕ್ಷೆಯಂ ಮಾಡಿಸುವನೋ; ಆ ಅಧಿಕಾರಿಗೆ ಅಪ ರಾಧಾನುಗುಣ ವಾಗಿ ಮಧ್ಯಮ ದಂಡವಂ ವಿಧಿಸಬೇಕು.

ಬಂಧನದಲ್ಲಿ ಶಿಕ್ಕಿದಂತಾ ವಧ್ಯನಲ್ಲದವನಿಗೆ ರಾಜ ಶಾಸನವಿಲ್ಲಗೆ ಬಂಧನವಂ ಯಾವನು ತೆಗಿಸಿಬಿಡುವನೊ, ವ ಧ್ಯನಂ ಬಿಡಿಶಿ ಬಿಡುವನೋ ಅವನಿಗೆ ದ್ವಿಗುಣವಾದ ದಂಡವು

ರಾಜಸಭೆಯುವದು ಲೋಭವಿಂ ಶಾಸ್ತ್ರವನ್ನು ಲ್ಲಂಘಿಶಿ

ರಾಜ್ಞಾಸ್ತ್ರಿಂಶದ್ಗುಣೋದಂಡಃ ಪ್ರಕ್ಷೇಪ್ಯೋಉದಕೇಭವೇತ್ ।

ಅಲ್ಪದಂಡೇಧಿಕಂಕುರ್ಯಾತ್ ದ್ವಿಗುಣೇಚಾಲ್ಪಮೇವಚ । ಉ೩
ನಾಧಿಕಂತುತಂದಂಡಂಸಭ್ಯೋದದ್ಯಾತ್ಸ್ವಕಾದ್ಗೃಹಾತ್

ಯಾವತ್ ನ ವಧ್ಯಸ್ಯ ವಧೆ ತಾವತ್ ಸ್ವಧ್ಯಸ್ಯ ರಕ್ಷಣೆ । ಅಧ
ರ್ಶ್ರೋ ನೃಪತೆ ಶ್ದ್ರಷ್ಟಸ್ತಥಾ ವಧ್ಯಸ್ಯಮೋಕ್ಷಣೇ । ೨೧೮ ।

ಬ್ರಾಹ್ಮಣಂ ನೈವ ಹನ್ಯಾತ್ತು ಸರ್ವ ಪಾಪೇ ಷ್ವವಸ್ಥಿತಂ ।
ಪ್ರವಾಸಯೇತ್ಸ್ವಕಾತ್ ರಾಷ್ಟ್ರಾತ್ಸಮಗ್ರಧನಸಂಯುತಂ ।

ರಾಜಾತು ಬ್ರಾಹ್ಮಣಂಹನ್ಯಾತ್ ತತ್ಪಾತಕಂತ್ವಧಿಕಂಭವೇತ್ ।
ಯಸ್ಮಾತ್ತಸ್ಮಾತ್ಪ್ರಯತ್ನೇನ ಬ್ರಹ್ಮಹತ್ಯಾಂ ವಿವರ್ಜಯೇತ್
ಅದಂಡ್ಯಾನ್ ದಂಡಯೆ ದ್ರಾಜಾ ದಂಡ್ಯಾಶ್ಚೈವಾಪ್ಯದಂಡ

ವ್ಯವಹರಿಸಿದರೆ ದ್ವಿಗುಣ ದಂಡವು ರಾಜನು ತಾನೆ ಆ ರೀತಿಯಾಗಿ ವ್ಯವಹರಿಸೆ ತ್ರಿಂಶದ್ಗುಣಿತವಾದ ದಂಡವನ್ನು ವರುಣನಿಗೋಸ್ಕರ ನೀರಿನಲ್ಲಿ ಹಾಕಿ ಬ್ರಾಹ್ಮಣರಿಗೆ ಕೊಡಬೇಕು. ॥ ೨೭೮ ॥

ಅಪರಾಧ ಸ್ವಲ್ಪವಾಗಿರುವಲ್ಲಿ ಅಧಿಕ ದಂಡವನ್ನು ಅಧಿಕವಾಗಿರುವಲ್ಲಿ ನ್ಯೂನದಂಡವನ್ನು ಲೋಭಾದಿಗಳಿಂ ಗ್ರಹಿಸುವ ಅಧಿಕಾರಿಯು ಮನೆಯಿಂದ ದಂಡವಂ ಗ್ರಹಿಸಬೇಕು ॥ ೨೭೯ ॥

ಅವಧ್ಯನಂ ವಧಿಸುವದರಲ್ಲಿ ಯಷ್ಟು ಪಾಪವೋ ಅಷ್ಟುಪಾಪವು. ವಧ್ಯನಂ ರಕ್ಷಿಸುವನೆಗಲ್ಲೂ ಬಿಡಿಸುವದರಲ್ಲೂ ರಾಜನಿಗೆ ಬರೋಣದು ॥ ೨೮೦ ॥

ಸರ್ವ ಪಾಪ ಕೃತ್ಯಗಳಲ್ಲೂ ಬ್ರಾಹ್ಮಣನಂ ವಧಿಸಲಾಗದು. ಧನಸಹಿತನಾದ ಅವನನ್ನು ರಾಷ್ಟ್ರದಿಂ ಹೊರಡಿಸಬೇಕು. ॥ ೨೮೧॥

ಬ್ರಹ್ಮಹತ್ಯೆಯು ಪ್ರಾಯಶ್ಚಿತ್ತಗಳಿಂ ಹೋಗಲಾಡಿಸಲಶಕ್ಯವಾದ್ದರಿಂ ಯಾವಾಗಲೂ ಅದ ಮಾಡಲಾಗದು

ದಂಡ್ಯರಂ ದಂಡಿಸದೆ ಅದಂಡ್ಯರಂ ದಂಡಿಸುವ ರಾಜ

ಯಃ । ಅಯಶೋಮಹದಾಪ್ನೋತಿ ನರಕಂಚಾಧಿಗಚ್ಛತಿ ॥

ಜ್ಞಾತ್ವಾಪರಾಧಂ ಪುರುಷಸ್ಯರಾಜಾ ಕಾಲಂತಥಾಚಾನು
ಮತಂದ್ವಿಜಾನಾಂ ॥ ದಂಡ್ಯೇಷುದಂಡಂ ಪರಿಕಲ್ಪಯೇತ್ತು
ಯಾಯಸ್ಯಯುಕ್ತಃ ಸಸಮೀಕ್ಷ್ಯಕುರ್ಯಾತ್ ॥ ೨೧೮ ॥

ಇತಿ ಶ್ರೀ ಮತ್ಸ್ಯ ಪುರಾಣೇ ದಂಡ ಪ್ರಕಾಶನಾಮ
ದ್ವಿಶತೋತ್ತರ ಸಪ್ತವಿಂಶತಿ ತಮೋಽಧ್ಯಾಯಃ
ಸಂಪೂರ್ಣಃ





ವಿಗೆ ಮಹತ್ತಾದ ಅಪಯಶಸ್ಸಲ್ಲದೆ ನರಕವೂ ಕೂಡಬರು ವದು ॥ ೨೧೭ ॥

ಪುರುಷನ ಅಪರಾಧವನ್ನು, ಕಾಲವನ್ನೂ, ಬ್ರಾಂಹ್ಮಣರ ಅನುಮತಿಯನ್ನೂ, ತಿಳಿದು ಯಾವನಿಗೆಯಾವದು ಶಾಸ್ತ್ರೋಕ್ತವಾಗಿಧೆಯೊ ಆದಂಡವನ್ನ ವನಿಗೆ ರಾಜನು ಮಾಡಿಸ ಬೇಕು. ॥ ೨೧೮ ॥

ಯೆಂದು ಮತ್ಸ್ಯಮೂರ್ತಿ ಯಾದ ಭಗವಂತನು
ಪೇಳಿದ ನೊಬಲ್ಲಿಗೆ
೨೨೭ ನೆ ಅಧ್ಯಾಯ
ಸಂಪೂರ್ಣ





ಶ್ರೀರಸ್ತು

ಮನುರುವಾಚ ॥ ದಿವ್ಯಾಂತರಿಕ್ಷ ಭೌಮೇಷು ಯಾ ಶಾಂತಿರ
ಭಿಧೀಯತೇ ॥ ತಾಮಹಂ ಶ್ರೋತುಮಿಚ್ಛಾಮಿ ಮಹೋತ್ಪಾ
ತೇಷು ಕೇಶವ ॥ ೧ ॥

ಮತ್ಸ್ಯ ಉವಾಚ

ಅಥಾತಸ್ಸಂಪ್ರವಕ್ಷ್ಯಾಮಿ ತ್ರಿವಿಧಾ ಮದ್ಭುತಾದಿಷು ॥ ವಿಶೇ
ಷೇಣ ತು ಭೌಮೇಷು ಶಾಂತಿಃ ಕಾರ್ಯಾ ತಥಾ ಭವೇತ್

ಅಭಯಾ ಚಾಂತರಿಕ್ಷೇಷು ಸೌಮ್ಯಾ ದಿವ್ಯೇಷು ಪಾರ್ಥಿವ ॥
ವಿಜಿಗೀಷುಃ ಪರಂ ರಾಜನ್ ಭೂತಿ ಕಾಮಸ್ತಥಾ ಭವೇತ್ ॥
ವಿಜಿಗೀಷುಃ ಪರಾನ್ನೇವ ಮಾಭಿ ಯುಕ್ತ ಸ್ತಥಾ ಪರೈಃ ॥ ತ
ಥಾಭಿಚಾರ ಶಂಕಾಯಾಂ ಶತ್ರೂಣಾ ಮಭಿನಾಶನೇ ॥ ೩ ॥
ಭಯೇ ಮಹತಿ ಸಂಪ್ರಾಪ್ತೇ ಅಭಯಾ ಶಾಂತಿ ರಿಷ್ಯತೇ ।

ಇಂತು ಶ್ರೀಮತ್ಸ್ಯಮೂರ್ತಿಯಾದ ಭಗವಂತನು ಹೇಳುವಲ್ಲಿ ಮನು ವೃ ಯಲ್ಯೈ ದೇವ ದೇವನೆ ದೇವಲೋಕಾಂತರಿಕ್ಷಭೂಮಿ ಸಂಬಂಧಿಯಾದ ಮಹೋತ್ಪಾತಗಳಾಗುವಲ್ಲಿ ಯಾವ ಶಾಂತಿ ಯಂ ಮಾಡ ಬೇಕೋ ಅದಂ ಹೇಳಬೇಕು ॥ ೧ ॥

ಯಂದು ಪ್ರಶ್ನೆಯಂ ಮಾಡುವಲ್ಲಿ ಮತ್ಸ್ಯ ಮೂರ್ತಿಯಾದ ಭಗವಂತ ನಿಂತೆಂದನು. ॥ ಯಲ್ಯೈ ನೃಪೋ ತ್ರ್ಮನೆ ಸ್ಥಾನ ಭೇದದಿಂ ಮೂರುಬಗೆ ಯಾದ ಉತ್ಪಾತಗಳ ಶಾಂತಿಗಳಲ್ಲಿ ಭೌಮ ಶಾಂತಿಯು ವಿಶೇಷವಾಗಿ ಮಾಡ ತಕ್ಕದ್ದು

ಅಂತರಿಕ್ಷದಲ್ಲಿ ಧೂಮ ಕೇತ್ವಾದಿ ದರ್ಶನ ವಾಗಲು ಅಭಯ ಯೆಂಬ ಶಾಂತಿಯಂ ಮಾಡಬೇಕು. ಆಕಾಶದಲ್ಲುತ್ಪಾತ ವೇನಾದರುಂ ಕಾಣ್ಬರುವಲ್ಲಿ ಸೌಮ್ಯ ಯೆಂಬಶಾಂತಿಯಂ ಮಾಡಬೇಕು. ಪರಲೋಕ ಜಯಾ ಪೇಕ್ಷೆಯು, ಐಶ್ವರ್ಯಾ ಪೇಕ್ಷೆಯು, ಶತ್ರು ಜಯಾ ಪೇಕ್ಷೆಯು ಶತ್ರು ಗಳು ಅಕೃತ್ಯ ಪ್ರಯೋಗಾದಿಗಳಂ ಮಾಡಿಸಿರುವಲ್ಲಿಸುಖಾ ಪೇಕ್ಷೆಯು, ಶತ್ರು ನಾಶಾ ಪೇಕ್ಷೆಯು, ಮಹತ್ತರ ವಾದಂತಾ ಭಯ ವಿಶೇಷ ಬಂದಿರುವಲ್ಲಿ ಅಭಯಾ ಶಾಂತಿ ಯು ಮಾತಬೇಕು. ॥ ೪ ॥

ರಾಜಯಕ್ಷ್ಮಾಭಿಭೂತಸ್ಯ ಕ್ಷತ ಕ್ಷೀಣಸ್ಯ ಚಾಪ್ಯಥ । ೫

ಸೋಮವ್ಯಾ ಪ್ರಶಸ್ಯತೇ ಶಾಂತಿ ರ್ಯಜ್ಞ ಕಾಮಸ್ಯ ಚಾಪ್ಯಥ ।

ಭೂಕಂಪೇಚ ಸಮುತ್ಪನ್ನೇ ಪ್ರಾಪ್ತೇಚಾನ್ನ ಕ್ಷಯೇತಥಾ॥

ಅತಿವೃಷ್ಟ್ಯಾಮನಾವೃಷ್ಟ್ಯಾಂ ಶಲಭಾನಾಂಭಯೇಷುಚ

ಪ್ರಮತ್ತೇಷುಚಚೋರೇಷು ನೈಷ್ಣವೀ ಶಾಂತಿರಿಷ್ಯತೇ ॥ ೭

ಪಶೂನಾಂ ಮಾರಣೇ ಪ್ರಾಪ್ತೇ ನರಾಣಾಮಪಿದಾರುಣೇ ॥ ಭೂ

ತೇಷು ದೃಶ್ಯಮಾನೇಷು ರೌದ್ರೀ ಶಾಂತಿ ಸ್ತಥೇಷ್ಯತೇ ॥ ೮ ॥

ವೇದ ನಾಶೇ ಸಮುತ್ಪನ್ನೇ ಜನೇ ಜಾತೇಚ ನಾಸ್ತಿಕೇ ॥ ಅ

ಪೂಜ್ಯ ಪೂಜನೇ ಜಾತೇಬ್ರಾಹ್ಮೀ ಶಾಂತಿ ಸ್ತಥೇಷ್ಯತೇ ॥ ೯ ॥

ಭವಿಷ್ಯ ತ್ಯಭಿಷೇಕೇಚ ಪರಚಕ್ರ ಭಯೇಪಿ ಚ ॥ ಸ್ವರಾ

ಷ್ಟ್ರ ಭೇದೇ ರಿ ವಧೇ ರೌದ್ರೀ ಶಾಂತಿಃ ಪ್ರಶಸ್ಯತೇ ॥ ೧೦

ತ್ರ್ಯಹಾತಿ ರಿಕ್ತೇ ಪವನೇ ಭಷ್ಯೇ ಸರ್ವ ವಿಗರ್ಹಿತೇ ॥

ವೈಕೃತೇವಾತಜೇ ವ್ಯಾಧೌ ವಾಯವೀ ಶಾಂತಿ ರಿಷ್ಯತೇ ॥ ೧೧

ಕ್ಷಯ, ವ್ರಣ. ಅತಿಕಾರ್ಶ್ಯಗಳಿಂ ದುಃಖಪಡುವನು ಯಜ್ಞ ಸಾಧನಾಪೇಕ್ಷೆಯಾ ಕೂಡ ಸೋಮ ದೈವತಾಕ ಶಾಂತಿಯಂ ಮಾಡಬೇಕು ॥ ೬ ॥

ಭೂಕಂಪ, ಧನಧಾನ್ಯ ಕ್ಷಾಮ, ಅತಿ ವೃಷ್ಟ್ಯನಾವೃಷ್ಟಿ ಶಲಭಾದಿ ಭಯ, ಉನ್ಮತ್ತ ಚೋರಾದಿ ಪ್ರಾಪ್ತಿಯಲ್ಲಿ ವೈಷ್ಣವ ಶಾಂತಿಯಂ ಮಾಡಬೇಕು. ॥ ೭ ॥

ಪಶು. ಮನುಷ್ಯರಿಗೆ ನಾಶವಾಗುವಲ್ಲೂ, ಭೂತಾದಿ ದರ್ಶನವಾಗುವಲ್ಲೂ, ರೌದ್ರ ಶಾಂತಿಯಂ ಮಾಡಬೇಕು ॥ ೮ ॥

ವೇದನಾಶದಲ್ಲೂ, ಜನರು ನಾಸ್ತಿಕರಾಗುವಲ್ಲೂ ಅಪೂಜ್ಯ ಪೂಜೆಯಲ್ಲೂ ಬ್ರಾಹ್ಮಶಾಂತಿಯಂ ಮಾಡಬೇಕು

ರಾಜ್ಯಾಭಿಷೇಕ, ಶತ್ರುಭಯ, ಸ್ವರಾಷ್ಟ್ರಭೇದ ಶತ್ರುಸಂಹಾರಗಳಲ್ಲಿ ರೌದ್ರ ಶಾಂತಿಯಂ ಮಾಡಬೇಕು.

ಮೂರು ದಿನಗಳಿಗಧಿಕವಾಗಿ ಗಾಳಿಬಡಿಯುವಲ್ಲೂ ಭಕ್ಷ್ಯಪದಾರ್ಥವು ಸರ್ವಜುಗುಪ್ಸಿತವಾಗುವಲ್ಲೂ, ವಾಯುವಿಕಾರ ವ್ಯಾಧಿಗಳಲ್ಲೂ, ವಾಯು ಶಾಂತಿಯಂ ಮಾಡಬೇಕು. ॥ ೧೧ ॥

ಅನಾವೃಷ್ಟಿ ಭಯೇ ಜಾತೆ ಪ್ರಾಪ್ತೆ ವಿಕೃತಿ ವರ್ಷಣೆ ।
ಜಲಾಶಯ ವಿಕಾರೇಷು ವಾರುಣೀ ಶಾಂತಿರಿಷ್ಯತೆ ॥ ೧೭

ಅಭಿಶಾಪ ಭಯೇ ಪ್ರಾಪ್ತೇ ಭಾರ್ಗವೀ ಚ ತಥೈವ ಚ ।
ಜಾತೇ ಪ್ರಸವ ವೈಕೃತ್ಯೇ ಪ್ರಾಜಾಪತ್ಯಾ ಮಹಾ ಭಂಜ
ಉಪಸ್ಕ ರಾಜ್ಞಾಂ ವೈಕೃತ್ಯೇ ತ್ವಾಷ್ಟ್ರೀ ಪಾರ್ಥಿವ ನಂದನ
ಬಾಲಾನಾಂ ಶಾಂತಿ ಕಾಮಸ್ಯ ಕೌಮಾರೀ ಚ ತಥಾನೃಪ ।
ಕಾರ್ಯಾಶಾಂತಿ ಮಥಾಗ್ನೆಯೀಂ ಸಂಪ್ರಾಪ್ತೆವಹ್ನಿ ವೈಕೃತೆ
ಆಜ್ಞಾ ಭಂಗೆತು ಸಂಜಾತೆ ತಥಾ ಭೃತ್ಯಾದಿ ಸಂಕ್ಷಯೆ ।
ಅಶ್ವಾನಾಂ ಶಾಂತಿ ಕಾಮಸ್ಯ ತದ್ವಿಕಾರೆ ಸಮುತ್ಥಿತೆ ।
ಅಶ್ವಾನಾಂ ಕಾಮಯಾನಸ್ಯ ಗಾಂಧರ್ವೀ ಶಾಂತಿರಿಷ್ಯತೆ ।
ಗಜಾನಾಂ ಶಾಂತಿ ಕಾಮಸ್ಯ ತದ್ವಿಕಾರೆ ಸಮುತ್ಥಿತೆ ।
ಗಜಾನಾಂ ಕಾಮಯಾನಸ್ಯ ಶಾಂತಿರಾಂಗೀರಸೀ ಭವೇತ್ ।
ಪಿಶಾಚಾದಿಭಯೆಜಾತೆಶಾಂತಿರ್ವೈರ್ನ್ನೈಋತಿಸ್ಮೃತಾ । ಅಪ
ಮೃತ್ಯು ಭಯೆ ಜಾತೆ ದುಸ್ವಪ್ನೇ ಚ ತಥಾ ಸ್ಥಿತೆ । ೧೮ ॥
ಯಾಮ್ಯಾಂತು ಕಾರಯೆಶ್ಶಾಂತಿಂ ಪ್ರಾಪ್ತೆತು ನರಕೆತಥಾ ।
ಧನನಾಶೆ ಸಮುತ್ಪನ್ನೆ ಕೌಬೇರೀ ಶಾಂತಿರಿಷ್ಯತೆ । ೧೯ ।
ವೃಕ್ಷಾಣಾಂಚ ತಥಾರ್ಥಾನಾಂ ವೈಕೃತೆ ಸಮುಪಸ್ಥಿತೆ ।
ಭೂತಿಕಾಮಸ್ತಥಾಶಾಂತಿಂಪಾರ್ಥಿವೀಂಪ್ರತಿಯೋಜಯೆತ್
ಪ್ರಥಮೆದಿನ (ರೋಮೇ ಚ ರಾತ್ರೌ ವಾಮನುಜೋತ್ತಮ ।
ಹಸ್ತಸ್ವಾತೌಚಚಿತ್ರಾಯಾ ಮೊದಿತ್ಯೆಚಾಶ್ವಿನೆತಥಾ । ೨೧

ಅನಾವೃಷ್ಟಿ ಮೊದಲಾದ ವೃಷ್ಟಿವಿಕಾರಗಳಲ್ಲೂ, ಕೂಪಾದ್ಯುದಕ ವಿಕಾರಗಳಲ್ಲೂ, ವಾರುಣ ಶಾಂತಿಯಂ ಮಾಡಬೇಕು. ॥ ೧೨ ॥

ಅಪವಾದ ಭಯದಲ್ಲಿ ಶುಕ್ರ ಶಾಂತಿ ಯನ್ನೂ, ಪ್ರಸೂತಿ ವಿಕಾರದಲ್ಲಿ ಪ್ರಾಜಾಪತ್ಯ ಶಾಂತಿ ಯನ್ನೂ, ಶೂರ್ಪ ಭಾಂಡಾದಿ ಪದಾರ್ಥ ವಿಕಾರದಲ್ಲಿ ತ್ವಾಷ್ಟ್ರ ಶಾಂತಿ ಬಾಲಕೋಪ ದ್ರವ ಗಳಲ್ಲಿ ಸುಬ್ರಹ್ಮಣ್ಯ ಶಾಂತಿ ಯನ್ನು ಅಗ್ನಿ ಬಾಧಾಜ್ಞಾಭಂಗ ಭೃತ್ಯಾದಿಕ್ಷಯಗಳಲ್ಲಗ್ನಿ ಶಾಂತಿಯನ್ನು, ಅಶ್ವೋಪದ್ರವಗಲ್ಲಿ ಗಂಧರ್ವ ಶಾಂತಿಯನ್ನು, ಗಜೋಪದ್ರವಗಳಲ್ಲಾಂಗೀರಸ ಶಾಂತಿಯನ್ನು, ಅಪಮೃತ್ಯು ದುಸ್ವಪ್ನ ಪಿಶಾಚಾದಿಭಯದಲ್ಲಿ ನೈಋತ ಶಾಂತಿಯನ್ನು ನರಕ ಭಯದಲ್ಲಿ ಯಮ ಶಾಂತಿ ಯನ್ನು, ಧನ ಹಾನಿಯಲ್ಲಿ ಕುಬೇರ ಶಾಂತಿ ಯನ್ನು, ವೃಕ್ಷಾದಿ ವಿಕಾರ ದಲ್ಲಿಪೃಥ್ವೀ ಶಾಂತಿಯನ್ನೂ, ಮಾಡಬೇಕು ॥ ೨೩ ॥

ಹಗಲು ರಾತ್ರಿ ಪ್ರಥಮ ಯಾಮದಲ್ಲಿ ಹಸ್ತ ಸ್ವಾತೀ ಚಿತ್ರಾ ಪುನರ್ವಸು ಅಶ್ವಿನೀ ಉತ್ತರಾ ಮೃಗಶೀರ್ಷ ನ

ಅಗ್ನ್ಯವಿಷ್ಣುಸೌಮ್ಯಜಾತೇಷು ವಾಯವ್ಯಂತ್ಯದ್ಭೇಷು ಚ ॥
ದ್ವಿತೀಯ್ಯೇದಿವಯಾಮೇತು ರಾತ್ರೌ ಚ ರವಿನಂದನ ॥ ೨೨ ॥
ಪುಷ್ಯಾಗ್ನೇಯೆ ವಿಶಾಖಾಸು ಪಿತ್ರ್ಯಾಸು ಭರಣೀಷು ಚ ॥
ಉತ್ತ್ರಾತ್ರೇಷು ತಥಾಭಾಗ್ಯೇ ಆಗ್ನೇಯಾಂತೇಷು ಕಾರಯೇತ್ ॥
ತೃತೀಯೆದಿನ ಯಾಮೇಚ ರಾತ್ರೌಚ ರವಿನಂದನ ॥ ರೋಹಿ
ಣ್ಯಾಂವೈಷ್ಣವೆಬ್ರಾಹ್ಮೇ ವಾಸವೇಸ್ತ್ವೈಶ್ವದೇವತೆ ॥ ೨೪ ॥
ಜ್ಯೇಷ್ಠಾಯಾಂಚತಥಾಮೈತ್ರೇಯೇಭವಂತ್ಯದ್ಭುತಾಃಕ್ವಚಿತ್ ॥
ಐಂದ್ರೀತೇಷುಪ್ರಯೋಕ್ತವ್ಯಾ ಶಾಂತೀರವಿಕುಲೋದ್ವಹ ॥ ೨೫
ಚತುರ್ಥೇ ದಿನಯಾಮೇಚ ರಾತ್ರೌವಾರವಿನಂದನ ॥ ಸಾರ್ಪೇ
ಪೌಷ್ಣೇತಥಾರ್ದ್ರಾಯಾಂ ಮಹಿರ್ಬುಧ್ನೇ ಽ ಚ ದಾರುಣೆ ॥
ಮೂಲೆ ವರುಣದೈವತ್ಯೇ ಯೇಭವಂತ್ಯ ದ್ಭುತಾಸ್ತಥಾ ॥
ವಾರುಣೀತೇಷುಕರ್ತವ್ಯಾ ಮಹಾಶಾಂತಿರ್ಮಹೀಕ್ಷಿತಾ

ಕ್ಷತ್ರಗಳಲ್ಲಿ ಉತ್ಪಾತ ಕಂಡರೆ ವಾಯು ಶಾಂತಿಯಂ ಮಾಡಬೇಕು. ಹಗಲು ರಾತ್ರಿ ದ್ವಿತೀಯ ಯಾಮದಲ್ಲಿ ಪುಷ್ಯ ಕೃತ್ತಿಕಾ ವಿಶಾಖಾ, ಮಖಾ, ಭರಣೀ ಪೂರ್ವಾ ನಕ್ಷತ್ರಗಳಲ್ಲಿ ಉತ್ಪಾತ ಕಂಡರೆ ಅಗ್ನಿ ಶಾಂತಿಯಂ ಮಾಡಬೇಕು. ॥

ಹಗಲು ರಾತ್ರಿ ಮೂರನೇ ಯಾಮದಲ್ಲಿ ರೋಹಿಣೀ ಶ್ರವಣ ಅಭಿಜಿ ಧನಿಷ್ಠಾ ಉತ್ತರಾಷಾಢಾ ಜ್ಯೇಷ್ಠಾ ಅನೂರಾಧೆಗಳಲ್ಲಿ ಉತ್ಪಾತ ಕಂಡರೆ ಯಿಂದ್ರ ಶಾಂತಿಯಂ ಮಾಡಬೇಕು. ॥ ೨೫ ॥

ಹಗಲು ರಾತ್ರಿ ನಾಲ್ಕನೆ ಯಾಮದಲ್ಲಿ ಆಶ್ಲೇಷ ರೇವತ್ಯಾರ್ದ್ರಾ ಉತ್ತರಾ ಭಾದ್ರಾ ಪೂರ್ವಾಷಾಢಾ ಪೂರ್ವಾ ಭಾದ್ರ ಮೂಲ ಶತಭಿಷಜ್ನಕ್ಷತ್ರಗಳಲ್ಲಿ ಉತ್ಪಾತ ಕಂಡರೆ ವಾರುಣ ಶಾಂತಿಯಂ ಮಾಡಬೇಕು. ॥ ೨೬ ॥

ಸೂರ್ಯೋದಯ ಕಾಲದಲ್ಲಿ ಉತ್ಪಾತಕಂಡರೆ ರಾತ್ರಿ ನಾಲ್ಕನೇ ಯಾಮ ಹಗಲು ಒಂದನೇ ಯಾಮ ಗಳಿಗುಕ್ತ ವಾದ ಶಾಂತಿಗಳೆರಡನ್ನು, ಸೂರ್ಯಾಸ್ತ ಕಾಲದಲ್ಲಿ ಹಗಲು ನಾಲ್ಕನೇ ಯಾಮ ರಾತ್ರಿ ಒಂದನೇ ಯಾಮ ಗಳಿಗುಕ್ತವಾದ

ಮಿತ್ರಮಂಡಲ ಮೇಲೀಷು ಯೆಭವಂತ್ಯ ದ್ಭುತಾಃಕ್ವಚಿತ್ ।
ತತ್ರಶಾಂತಿದ್ವಯಂಕಾರ್ಯಂ ನಿಮಿತ್ತೆ ಷುಚಸಾನ್ಯಥಾ ॥ ೨೮
ನಿರ್ನಿಮಿತ್ತ ಕೃತಾ ಶಾಂತಿ ನಿರ್ನಿಮಿತ್ತೆ ನೋಪ ಯುಜ್ಯತೆ
ಬಾಣಪ್ರಹಾರಾ ನಭವಂತಿಯದ್ವ ದ್ರಾಜನ್ನೃಣಾಂಸನ್ನ
ಹನ್ಯೈರ್ಯುತಾನಾಂ । ನೃಪೋಪ ಘಾತಾ ನಭವಂತಿತದ್ವತ್
ಧರ್ಮಾತ್ಮನಾಂಶಾಂತಿ ಪರಾಯಣಾನಾಂ ॥ ೨೯ ॥

---

ಇತಿ ಶ್ರೀ ಮತ್ಸ್ಯಪುರಾಣೆ ಅದ್ಭುತಶಾಂತಿರ್ನಾಮ
ದ್ವಿಶತೋತ್ತರ ಅಷ್ಟವಿಂಶತಿ ತಮೋಧ್ಯಾಯಃ
ಸಂಪೂರ್ಣಃ



ಗಡ, ಶಾಂತಿಗಳನ್ನು, ಮಾಡಬೇಕು. ನಿರ್ನಿಮಿತ್ತವಾಗಿ ಶಾಂತಿಯಂ ಮಾಡಿದಾಗ್ಯೂ ಅದು ಉತ್ಪಾತ ದೋಷ ಪರಿಹಾರಕ ವಾಗುವದು.

ದೃಢ ಕವಚ ಧಾರಿಗಳಿಗೆ ಹ್ಯಾಗೆ ಬಾಣವ್ಯಥೆಗಳಾಗುವದಿಲ್ಲವೋ ಹಾಗೆ ಧರ್ಮಾತ್ಮರಾಗಿ ಶಾಂತಿ ಪರಾಯಣರಾದವರಿಗೆ ದೈವೋಪದ್ರವಗಳಾಗುವದಿಲ್ಲ. ॥ ೨೯ ॥

ಯೆಂದು ಮತ್ಸ್ಯ ಮೂರ್ತಿ ಯಾದ ಭಗವಂತನು

ಹೇಳಿದನೆಂಬಲ್ಲಿಗೆ

೨೨೮ ನೇ ಅಧ್ಯಾಯ

ಸಂಪೂರ್ಣ.



ಓಂ

ಶ್ರೀರಸ್ತು

ಮನುರುವಾಚ

ಅದ್ಭುತಾನಾಂ ಫಲಂ ದೇವ ಶಮನಂ ಚ ತಥಾವದ ॥ ತ್ವಾಂಹಿ
ವೇತ್ತಿ ವಿಶಾಲಾಕ್ಷ ಜ್ಞೇಯಂ ಸರ್ವ ಮಶೇಷತಃ ॥ ೧ ॥

ಮತ್ಸ್ಯ ಉವಾಚ

ಅತ್ರ ತೇ ವರ್ಣಯಿಷ್ಯಾಮಿ ಯದುವಾಚ ಮಹಾತಪಾಃ
ಅತ್ರಯೇ ವೃದ್ಧಗರ್ಗಸ್ತು ಸರ್ವಧರ್ಮಭೃತಾಂವರಃ ॥
ಸರಸ್ವತ್ಯಾಸ್ಸುಖಾಸೀನಂ ಗರ್ಗಂ ಸ್ರೋತಸಿ ಪಾರ್ಥಿವ ॥ ಪ
ಪ್ರಚ್ಛ ಸ ಮಹಾತೇಜಾ ಅತ್ರಿರ್ಮುನಿ ಜನಪ್ರಿಯಂ ॥ ೨ ॥

ಅತ್ರಿರುವಾಚ

ನಕ್ಷತ್ರಾಣಾಂ ಪೂರ್ವರೂಪಾಣಿ ಜನಾನಾಂ ಕಥಯಸ್ವ ಮೇ ॥
ನಗರಾಣಾಂ ತಥಾ ರಾಜ್ಞಾಂ ತ್ವಂಹಿ ಸರ್ವಂ ವದಸ್ವ ಮಾಂ

ಗರ್ಗ ಉವಾಚ

ಪುರುಷಾಪಚಾರಾನ್ನಿಯತಮಪರಜ್ಯಂತಿ ದೇವತಾಃ ॥ ತತೋ
ಪರಾಗಾ ದ್ದೇವಾನಾಂ ಉಪಸರ್ಗಾಃ ಪ್ರವರ್ತತೇ ॥ ೩ ॥

## ಶ್ರೀರಸ್ತು



ಬೀಕಸೆನುವ ಉತ್ಪಾತಗಳ ಫಲವನ್ನು ಅವುಗಳಿಗೆ ಶಮನವನ್ನು ಹೇಳ ಬೇಕೆಂದು ಕೇಳುವಲ್ಲಿ ಮತ್ಸ್ಯ ಮಹರ್ಷಿ ಯಿಂತೆಂದನು ॥ ೧ ॥

ಯತ್ರೈ ರಾಜೋತ್ತಮನೆ ಸರ್ವಧರ್ಮಜ್ಞನಾದ ವೃದ್ಧಗರ್ಗಾಚಾರ್ಯನು ಅತ್ರಿ ಮುನೀಶ್ವರನಿಗೆ ಈ ವಿಷಯ ದೊಳ್ಪೇಳ್ದ ವೃತ್ತಾಂತವಂ ಪೇಳುವೆನು ॥ ೨ ॥

ಸರಸ್ವತೀ ತೀರದೊಳ್ಸುಖವಾಗಿ ಕುಳಿತಿರುವ ಗರ್ಗಾಚಾರ್ಯರನ್ನತ್ರಿಮುನಿಯು ಯತ್ರೈ ಜ್ಞಾನನಿಧಿಯೆ ನಷ್ಟರಾಗುವ ರಾಜನಗರ ಜನಗಳಿಗೆ ಪೂರ್ವರೂಪವೆನಾಗುವದೂ ಅದೆಲ್ಲವಂ ಪೇಳಬೇಕೆಂದು ಪ್ರಶ್ನೆ ಗೆಯ್ಯುವಲ್ಲಿ ಗರ್ಗನಿಂತೆಂದನು ॥ ೪ ॥

ಯತ್ರೈ ಮಹಾ ಮುನಿಯೆ ಜನಗಳ ದುರಾಚಾರಗಳಿಂ ದೇವತೆಗಳು ಕುಪಿತರಾಗುವರು ಅದರಿಂ ಲೋಕಕ್ಕೆ ಧಯುಂ ಟಾಗುವದು ॥ ೫ ॥

ದಿವ್ಯಾಂತರಿಕ್ಷ ಭೌಮಂಚ ತ್ರಿವಿಧಂ ಸಂಪ್ರಕೀರ್ತಿತಂ ॥
ಗ್ರಹರ್ಕ್ಷವೈಕೃತಂದಿವ್ಯ ಮಾಂತರಿಕ್ಷಂ ನಿಬೋಧಮೇ ॥ ೬

ಉಲ್ಕಾಪಾತೋ ದಿಶಾಂದಾಹಃ ಪರಿವೇಷ ಸ್ತಥೈವಚ ॥ ಗಂಧ
ರ್ವನಗರಂ ಚೈವ ವೃಷ್ಟಿಶ್ಚ ವಿಕೃತಾ ಚಯಾ ॥ ೭ ॥

ಏವಮಾದೀನಿಲೋಕೇಸ್ಮಿಂ ನ್ನಾಂತರಿಕ್ಷಂನಿರ್ದಿಶೇತ್ ॥ಚರ
ಸ್ಥಿರಭವೋಭೌಮಾ ಭೂಕಂಪ ಶ್ಚಾಪಿ ಭೂಮಿಜಃ ॥ ೮ ॥

ಜಲಾಶಯಾನಾಂ ವೈಕೃತ್ಯಂ ಭೌಮಂ ತದಪಿ ಕೀರ್ತಿತಂ॥
ಭೌಮೋತ್ವಲ್ಪಫಲಂ ಜ್ಞೇಯಂ ಚಿರೇಣಚಪಿಪಚ್ಯತೇ ॥ ೯ ॥
ಅಭ್ರಜಂ ಮಧ್ಯಫಲದಂ ಮಧ್ಯಕಾಲಫಲಪ್ರದಂ ॥ ಅದ್ಭು
ತೇತು ಸಮುತ್ಪನ್ನೇ ಯದಿವೃಷ್ಟಿ ಶ್ಶಿವಾ ಭವೇತ್ ॥ ೧೦ ॥

ಅದಕ್ಕೆಪೂರ್ವ-ಕಾಲದೊಳ್ ದಿವ್ಯಾಂತರೀಕ್ಷಭೌಮ ಗಳಾದಉತ್ಪಾತಗಳುಂಟಾಗುವವೋ ಅವುಗಳಲ್ಲಿ ಗ್ರಹನಕ್ಷತ್ರಗಳವಿಕಾರವು ದಿವ್ಯವೆನಿಸುವದು ॥ ೬ ॥

ಅಂತರಿಕ್ಷದಿಂ ಕೊಳ್ಳಿ ಬೀಳುವದು ದಿಕ್ಕುಗಳಲ್ಲಿ ರಿಯುಂಟಾಗುವದು ಸೂರ್ಯಚಂದ್ರರಿಗೆ ಪರಿವೇಷವು ಗಂಧರ್ವನಗರವು. ವೃಷ್ಟಿ ವಿಕಾರ ಮೊದಲಾದ್ದು ಸಹ ಅಂತರಿಕ್ಷನೆನಿಸುವದು ॥ ೭ ॥

ಸ್ಥಿರಚರ ಪ್ರಾಣಿಗಳ ವಿಕಾರವು ಭೂಕಂಪವು; ಜಲಾಶಯವಿಕಾರವು; ಪೈರಗಳವಿಕಾರವು, ಸಹಭೌಮ ವೆನಿಸುವದು ॥ ೮ ॥

ನಕ್ಷತ್ರ, ಪಾತಾದ್ಯುತ್ಪಾತದ ಫಲವು ಶೀಘ್ರ ವಾಗಿಯುಂಸಾವಕಾಶ ವಾಗಿ ಯುಂ ಆಗದೆಮಧ್ಯ ಕಾಲದಲ್ಲಾಗುವದು; ಉತ್ಪಾತ ಕಂಡಯೇಳು ದಿನಗಳೊಳಗೆ ಒಳ್ಳೆಮಳೆಯಾಗಲಾಉತ್ಪಾತವು ನಿಷ್ಫಲ ವಾಗುವದು ಶಾಂತಿಯಿಲ್ಲದೆಉತ್ಪಾತದಫಲತಪ್ಪಲಾರದು. ॥ ೧೧ ॥

ಸಪ್ತಾಹಾಭ್ಯಂತರೇಜ್ಞೇಯ ಮದ್ಭುತಂನಿಷ್ಫಲಂಭವೇತ್
ಅದ್ಭುತಸ್ಯ ವಿಪಾಕಶ್ಚ ವಿನಾಶಾಂತ್ಯಾ ನದೃಶ್ಯತೇ ॥ ೧೧ ॥
ತ್ರಿಭಿರ್ವರ್ಷೈ ಸ್ತಥಾಜ್ಞೇಯಂ ಸುಮಹದ್ಭಯ ಕಾರಕಂ ।
ರಾಜ್ಞಃ ಶರೀರೇ ಲೋಕೇಚ ಪುರದ್ವಾರೇ ಪುರೋಹಿತೇ ॥ ೧೨ ॥
ಪಾಕಮಾಯಾತಿಪುತ್ರೇಷು ತಥಾವೈಕೋಶವಾಹನೇ ।
ಋತುಸ್ವಭಾವಾದ್ರಾಜೇಂದ್ರ ಭವಂತ್ಯದ್ಭುತಸಂಜ್ಞಿತಾಃ ॥
ಶುಭಾವಹಾಸ್ತೇ ವಿಜ್ಞೇಯಾಸ್ತಾಂಶ್ಚಮೇ ಗದತಃ ಶೃಣು ।
ವಜ್ರಾಶನಿ ಮಹೀಕಂಪ ಸಂಧ್ಯಾನಿರ್ಘಾತನಿಸ್ವನಾಃ ॥ ೧೩ ॥
ಪರಿವೇಷ ರಜೋ ಧೂಮ ರಕ್ತಾರ್ಕಾ ಸ್ತಮಯೋದಯಾಃ
ದ್ರುಮಾದ್ಭೇದಪರಸ್ನೇಹೋ ಬಹುಶಸ್ಸಫಲದ್ರುಮಃ ॥ ೧೪ ॥
ಗೋ ಪಕ್ಷಿ ಮಧು ವೃದ್ಧಿ ಶ್ಚ ಶುಭಾನಿ ಮಧು ಮಾಧವೇ ।

ಋಕ್ಷೋಲ್ಕಾಪಾತಕಲುಷಂಕಪಿಲಾರ್ಕೇಂದುಮಂಡಲಂ ॥೧೬
ಕೃಷ್ಣಶ್ವೇತಂತಥಾಪೀತಂ ಧೂಸರಧ್ವಾಂತಲೋಹಿತಂ ।

ಭಯಂಕರವಾಗಿಯುಂಟಾದ ಉತ್ಪಾತವು ಮಹಾದು ರ್ಭಿಕ್ಷಗಳಿಗೆ ಫಲಿಸುವದು ಅದರಿಂದ ರಾಜನಶರೀರ ಕ್ಕಾಗಲೀ ಪ್ರಜೆಗಳಿಗಾಗಲೀ ಪುರದ್ವಾರ ಗಳಿಗಾಗಲೀ ಪುರೋಹಿತನಿಗಾಗಲೀ ಪುತ್ರರಿಗಾಗಲೀ ಬೊಕ್ಕಸ ಕ್ಕಾಗಲೀ ಗಜಾಶ್ವಶಾಲೆಗಳಿಗಾಗಲೀ ಹಾನಿಬರುವದು ॥ ೧೨ ॥

ಉತ್ಪಾತಗಳು ಅಶುಭವಾದರುಂ ಋತುಸ್ವಭಾವದಿಂ ಕೆಲವು ಶುಭಫಲವಾಗುವವು ಅದೆಂಕೇಳುವನಾಗು. ವಸಂತ ಋತುವಿನಲ್ಲಿ ಸಿಡಿಲು ಮಿಂಚು ಭೂಕಂಪ ಸಂಧ್ಯಾಕಾಲದಲ್ಲಿ ಗುಡುಗು ಮೊದಲಾದಂಥಾ ಭಯಂಕರವಾದ ಶಬ್ದಗಳು ಪರಿವೇಷಗಳು ರಜೋಧೂಮಗಳಿಂದದಿಗ್ವ್ಯಾಪ್ತಿಯು ಅತಿ ರಿಕ್ತನಾದ ಸೂರ್ಯನ ಅಸ್ತೋದಯಗಳು ವೃಕ್ಷಗಳಲ್ಲಿ ಮತ್ತೊಂದು ವೃಕ್ಷ ಉದಿಸುವದು. ಅತಿಯಾಗಿ ಫಲಿಸುವದು. ಗೋ, ಪಕ್ಷಿ, ಮಧುಗಳಿಗೆ ಅತಿ ವೃದ್ಧಿಯು ಸಹಶುಭಕರವು. ॥ ೧೩ ॥

ಗ್ರೀಷ್ಮ ಋತುವಿನಲ್ಲಿ ಕೊಳ್ಳಿನಕ್ಷತ್ರ ಬೀಳುವದು ಸೂರ್ಯ, ಚಂದ್ರ ಮಂಡಲಗಳು ಕಪಿಲ ವರ್ಣವಾಗುವದು. ಕಪ್ಪು, ಬಿಳಪು, ಹಳದಿ ಯಾಗಿಯುಂ, ಧೂಮ್ರ ವರ್ಣ

ಗರ್ತಪ್ರಹ ಸ್ಫುರಣಂ ಸಾಂಧ್ಯಂ ನಭಃಕ್ಷುಬ್ಧಾರ್ಧ್ರ ವ್ರೋಷವಂ ॥
ಸರಿತಾಂಚಾಂಬುಸಂಶೋಷಂ ದೃಷ್ಟ್ವಾ ಗ್ರೀಷ್ಮೇ ಶುಭಂ ಭವೇತ್ ॥

ಶಕ್ರಾಯುಧಪರಿವೇಷಂ ವಿದ್ಯುದುಲ್ಕಾಧಿರೋಹಣಂ ॥
ಕಂಪ್ರೋ ದ್ವರ್ತನ ವೈಕೃತ್ಯಂ ಹ್ರಸನಂ ದಾರಣಂ ಕ್ಷಿತೇಃ । ನ
ದ್ಯೋದ ಪಾನ ಸರಸಾಂ ವಿಧೂನ ತರಣ ಪ್ಲವಾಃ ೧೯
ಶೃಂಗಿಣಾಂಚ ವಂಶಹಾಣಾಂ ವರ್ಷಾಸು ಶುಭ ಮಿಷ್ಯತೇ ।

ಶೀತಾನಿಲ ತುಷಾರತ್ವಂ ದರ್ಶನಂ ವೃಗಪಕ್ಷಿಣಾಂ ॥ ೨೦

ವಾಗಿಯುಂ, ಅಂಧಕಾರಯುಕ್ತವಾಗಿಯುಂ, ರಕ್ತವೃಷ್ಟಿ ದಂತೆ ಕೆಂಪಾಗಿಯುಂ ಆಕಾಶ ವಾಗುವದು. ಮತ್ತು ಮ ದು ಸಂಧ್ಯಾ ಕಾಲದೋಳ್ ಕ್ಷುಬ್ಧವಾದ ಸಮುದ್ರ ದಂತೆ ಕಾಣ್ಬರುವದು, ನದಿಗಳಲ್ಲುದಕ ಶೋಷಿಸುವದು. ಸಹ ಶುಭಕರವು. ॥ ೧೭ ॥

ವರ್ಷಋತುವಿನಲ್ಲಿ ಕಾಮನ ಬಿಲ್ಲುಗಳ್, ಕಾಣ್ಬ ರುವದು, ಸೂರ್ಯ, ಚಂದ್ರರಿಗೆ ಪರಿವೇಷ ಕಟ್ಟುವದು, ಮಿಂಚುಗಳುದಯಿಸುವದು. ಅಗ್ನಿಯಂತೆ ಜ್ವಲಿಸುವ ನ ಕ್ಷತ್ರ ಬೀಳುವದು, ಅದೊಂದೆಡೆಯೊಳ್ ಬಹಳ ಮೊತ್ತಾ ಗುವದು. ಭೂಕಂಪವು, ವೃದ್ಧಾರ್ಚನೆಯಾದ ಪ್ರತಿಮೆಗಳಿ ಗೆ ಪೂರ್ವದಂತೆ ವಿಕಾರ ವಾಗುವದು ಒಂದೆಡೆಯೊಳ್ ನೇ ರ್ತಿಗ್ಗಿ ಬಿರಿಯುವದು. ನದೀ, ಜಲಾಶಯ, ಸರೋವರಗಳ ಲ್ಲಿ ಶೃಂಗವುಳ್ಳ ಮಹಿಷಾದಿಗಳು, ಹಂದಿ ಮೊದಲಾದವು ಗಳು ಸಹ ವೈಕೊಡನಿ ಕೊಂಡೀಜಾಡುವದು ಸಹ ಶುಭ ಕರವು. ॥ ೧೮ ॥

ಅತಿ ಶೀತವಾದ ಗಾಳಿ ಮಂಜು ಗಳು ಮೃಗ, ಪಕ್ಷಿ ಕೋಲಾಹಲವು ರಕ್ಷೋ ಭೂತ ಪಿಶಾಚಗಳ ದರ್ಶನವು ಅ

ರಕ್ಷೋಭೂತಪಿಶಾಚಾನಾಂ ದರ್ಶನಂವಾಗಮಾನುಷೀ । ದಿಶೋ
ಧೂಮಾಂಧಕಾರಾಂಶ್ಚ ಸನಭೋವನ ಪರ್ವತಾಃ ॥ ೨೧
ಉಚ್ಚೈಃ ಸೂರ್ಯೋದಯಾಸ್ತಾಚ ಹೇಮಂತೇಶೋಭನಾಸ್ಮೃ
ತಾಃ ॥

ದಿವ್ಯಸ್ತ್ರೀರೂಪಗಂಧರ್ವವಿಮಾನಾದ್ಭುತದರ್ಶನಂ ॥ ೨೨ ॥
ಗ್ರಹನಕ್ಷತ್ರತಾರಾಣಾಂ ದರ್ಶನಂವಾಗಮಾನುಷೀ । ಗೀತ
ವಾದಿತ್ರ ನಿರ್ಘೋಷೋ ವನ ಪರ್ವತ ಸಾನುಷು ॥ ೨೩ ॥
ಸಸ್ಯ ವೃದ್ಧಿ ರಸೋ ತ್ಪತ್ತಿಃ ಶರತ್ಕಾಲೇ ಶುಭಾ ಸ್ಮೃತಾಃ ।
ಹಿಮಪಾತಾನಿಲೋತ್ಪಾತ ವಿರೂಪಾದ್ಭುತದರ್ಶನಂ ॥ ೨೪ ॥
ಕೃಷ್ಣಾಂಜನಾಭ್ರಮಾಕಾಶಂ ತಾರೋಲ್ಕಾಪಾತಪಿಂಜರಂ ।
ಚಿತ್ರಗರ್ಭೋದ್ಭವಃಸ್ತ್ರೀಷು ಗೋಜಾಶ್ವಮೃಗಪಕ್ಷಿಷು ॥ ೨೫ ॥
ಪತ್ರಾಂ ಕುರ ಲತಾನಾಂ ಚ ವಿಕಾರಃ ಶಿಶಿರೇ ಶುಭಾಃ ॥ ...

ಋತು ಸ್ವಭಾವೇನ ವಿನಾದ್ಭುತಸ್ಯ ಜಾತಸ್ಯ ದೃಷ್ಟಸ್ಯ ತು

ಮಾನುಷ ವಾಕ್ಯಾಗುವದು ಆಕಾಶ, ವನ, ಪರ್ವತ ಸಹಿತ ವಾದ ದಿಕ್ಕುಗಳು ಧೂಮ ಭರಿತ ವಾಗುವದು, ಸೂರ್ಯ ನು ಉದಯಾಸ್ತ ಗಳಲ್ಲಿ ಸ್ಪಷ್ಟವಾಗಿ ಕಾಣುವದು ಸಹ ಹೇಮಂತದಲ್ಲಿ ಶುಭಕರವು ॥ ೨೧ ॥

ಶರತ್ಕಾಲದಲ್ಲಿ ದಿವ್ಯಸ್ತ್ರೀರೂಪ, ಗಂಧರ್ವ, ವಿಮಾನ ಗೃಹ, ನಕ್ಷತ್ರ ತಾರಾದರ್ಶನವು ಅಮಾನುಷ ವಾಕ್ಯಾನ ಣವು ವನ ಗಿರಿಗಳಲ್ಲಿ ಗೀತ, ವಾದ್ಯ ಧ್ವನಿ ಯಾಗುವದು ಪೈರುಗಳ ವೃದ್ಧಿ ರಸೋತ್ಪತ್ತಿ ಸಹ ಶುಭಕರವು. ॥ ೨೨

ಹಿಮ ವಧಿಕವಾಗಿ ಬೀಳುವದು, ವಕ್ರವಾಗಿ ಗಾಳಿ ಬೀಸುವದು, ವಿಕಾರವಾದ ಆಶ್ಚರ್ಯ ದರ್ಶನವು ಆಕಾಶವ ತಿ ಕಪ್ಪಾಗಿ ಉರಿಯುವ ತಾರೆಗಳು ಬೀಳುವದರಿಂ ಕಳವಿ ಯಾಗಿ ಕಾಣ್ಬರುವದು, ಸ್ತ್ರೀರು ಗಳಲ್ಲೂ, ಗೋವು ಮೇಕೆ, ಕುದುರೆ, ಜಿಂಕೆ ಮೊದಲಾದವು ಗಳಲ್ಲಿ ವಿಚಿತ್ರ ಗರ್ಭೋತ್ಪತ್ತಿ ಯಾಗುವದು ಸಹ ಶಿಶಿರ ಋತುವಿ ನಲ್ಲಿ ಶು ಭಕರವು. ॥ ೨೩ ॥

ಋತು ಸ್ವಭಾವ ಹೊರತಾಗಿ ಉಂಟಾದ ಉತ್ಪಾ

ಶೀಘ್ರಮೇವಚ । ಯಥಾ ಗಮಂ ಶಾಂತಿರನಂತರಂತು ಕಾರ್ಯಾ
ಯಥೋಕ್ತಾ ವಸುಧಾಧಿಪೇನ ॥ ೨೬ ॥ ... ... . .



ಇತಿ ಶ್ರೀ ಮತ್ಸ್ಯಪುರಾಣೇ ಅದ್ಭುತ ಶಾಂತಿರಾತ್ರಾಪ್ತಿಕೋ
ನಾಮ ಏಕೋನತ್ರಿಂಶ ದುತ್ತರ ದ್ವಿಶತತಮೋ
ದ್ಯಾಯಸ್ಸಂಪೂರ್ಣಃ



ಶ್ರೀರಸ್ತು

## ಗರ್ಗ ಉವಾಚ

ದೇವತಾರ್ಚಾಃ ಪ್ರನೃತ್ಯಂತಿ ವೇಪಂತೇ ಪ್ರಜ್ವಲಂತಿಚ ॥ ವ
ಮಂತ್ಯಗ್ನಿಂ ತಥಾ ಧೂಮಂ ಸ್ನೇಹಂ ರಕ್ತಂ ತಥಾವಸಾಂ
ಆರಯಂತಿ ರುದಂತ್ಯೇತಾಃ ಪ್ರಖಿದ್ಯಂತಿ ಹಸಂತಿಚ ॥ ಉತ್ತಿ
ಷ್ಠಂತಿ ನಿಷೀದಂತಿ ಪ್ರಧಾವಂತಿ ದಮಂತಿ ಚ ॥ ೨ ॥
ಭುಂಜತೇ ವಿಕ್ಷಿಪಂತೇವಾ ಕೋಶ ಪ್ರಹರಣ ಧ್ವಜಾಃ ॥ ಅ
ವಾಙ್ಮುಖಾವೈಭವಂತಿ ಸ್ಥಾನಾತ್ಸ್ಥಾನಂಭ್ರಮಂತಿಚ ॥ ೩

ತಗಳಿಗೆ ರಾಜನು ಶಾಸ್ತ್ರೋಕ್ತವಾದ ಶಾಂತಿಯುಶೀಘ್ರವಾ
ಗಿ ಮಾಡಿಸಬೇಕು. ॥ ೨೬ ॥



ಯೆಂದು ಗರ್ಗಾಚಾರ್ಯನು ಹೇಳಿದನೆಂಬಲ್ಲಿಗೆ

೨೮ ನೇ ಅಧ್ಯಾಯ

ಸಂಪೂರ್ಣ



ಶ್ರೀರಸ್ತು



ಪುನಃ ಗರ್ಗಾಚಾರ್ಯನು ಹೇಳಿದ ಪದೇಶನೆ ದೇವತಾ
ಪ್ರತಿಮೆಗಳು, ಕುಣಿಯುವದು, ನಡಗುವದು, ಉರಿಯುವ
ದು. ಅಗ್ನಿ, ಧೂಮ, ತೈಲ, ವಸಾ, ರಕ್ತ, ಗಳಂಕಕ್ಕುವ
ದು. ಕೂಗುವದು, ಅಳುವದು. ಬೆವರುವದು, ನಡಗುವ
ದು, ಯೇಳುವದು, ಕಾಳಿತು ಕೊಳ್ಳುವದು, ಹೊಂದುವದು
ಊದುವದು, ಭಜಿಸುವದು ಶಸ್ತ್ರಗಳನ್ನು ಅವುಗಳಹೊ

ಏವಮಾದ್ಯಾಃ ದೃಶ್ಯಂತೇ ವಿಕಾರಾ ಸ್ಸಹಸ್ರೋತ್ಥಿತಾಃ ॥
ಲಿಂಗಾಯತನವಿಪ್ರೇಷು ತತ್ರವಾಸಂ ನರೋಚಯೇತ್ ॥ ೪ ॥

ರಾಜ್ಞೋವಾ ವ್ಯಸನಂ ತತ್ರ ಸಚದೇಶೋ ವಿನಶ್ಯತಿ ॥ ದೇವ
ಯಾತ್ರಾಸು ಚೋತ್ಪಾತಾನ್ದೃಷ್ಟ್ವಾ ದೇಶಭಯಂ ವದೇತ್ ॥

ಪಿತಾಮಹಸ್ಯ ಹರ್ಮ್ಯೇಷು ತತ್ರವಾಸಂ ನರೋಚಯೇತ್ ॥
ಪಶೂನಾಂರುದ್ರಜಂಜ್ಞೇಯಂ ನೃಪಾಣಾಂಲೋಕಪಾಲಜಂ
ಜ್ಞೇಯಂಸೇನಾಪತೀನಾಂಚ ಯತ್ಸ್ಯಾತ್ಸ್ಕಂದವಿಶಾಖಜಂ
ಲೋಕಾನಾಂವಿಷ್ಣುಜಂ ವಿದ್ಯಾದ್ವಿಶ್ವಕರ್ಮಸಮುದ್ಭವಂ ॥ ೨
ವಿನಾಯಕೋದ್ಭವಂಜ್ಞೇಯಂಗಣಾನಾಮೇಕನಾಯಕಾಃ
ದೇವಪ್ರೇಷ್ಯಾನ್ನೃಪಪ್ರೇಷ್ಯಾ ದೇವಸ್ತ್ರೀಭಿರ್ನೃಪಸ್ತ್ರಿಯಃ ॥

ವಸುದೇವೋದ್ಭವಂಜ್ಞೇಯಂ ಗ್ರಹಾಣಾಮೇವನಾನ್ಯಥಾ ॥

ರೆಗಳನ್ನು ಧ್ವಜಗಳಂ ಸಹ, ಬಿಸಪ್ಪುವದು ಅಧೋ ಮುಖ
ವಾಗುವದು ಸ್ಥಾನಾಂತರಕ್ಕೆ ಹೋಗುವದು ಇದೇ ಮೊದ
ಲಾದಉತ್ಪಾತಗಳು ದೇವಸ್ಥಾನ ಬ್ರಾಹ್ಮಣಗೃಹಗಳಲ್ಲಿಂ
ಟಾಗುವಲ್ಲಿ ರಾಜನಿಗೆ ವ್ಯಸನ ಬರುವ ದಲ್ಲದೆ ದೇಶವು
ಹಾಳಾಗುವದ್ದರಿಂದಲ್ಲಿ ವಾಸವಂ ಮಾಡಲಾಗದು ॥ ೮ ॥

ದೇವತಾ ಯಾತ್ರೆಗಳಲ್ಲೂ, ಬ್ರಹ್ಮ ದೇವರ ದೇವ
ಸ್ಥಾನ ಗಳಲ್ಲು ಇಂಧಾ ಉತ್ಪಾತಗಳ ಕಂಡರೆ ಆದೇಶಗಳ
ಲ್ಲಿರಲಾಗದು. ॥ ೯ ॥

ರುದ್ರ ಪ್ರತಿಮೆ ಗಳಲ್ಲುತ್ಪಾತ ಕಂಡರೆ ಪಶುಗಳಿಗೂ
ಗೋ ಪಾಲ ಪ್ರತಿಮೆ ಗಳಲ್ಲಿ ಧೊರೆಗಳಿಗೂ ಸ್ಕಂದಪ್ರತಿಮೆ
ಗಳಲ್ಲಿ ಸೇನಾಪತಿಗಳಿಗೂ ವಿಷ್ಣುವಸುಇಂದ್ರ ವಿಶ್ವಕರ್ಮ ಪ್ರ
ತಿಮೆಗಳಲ್ಲಿ ಪ್ರಜೆಗಳಿಗು ಗಣಪತಿಪ್ರತಿಮೆಗಳಲ್ಲಿ ಗುಂಪಿನ
ಅಧಿಪತಿಗಳಿಗೂ ಗರುಡಾಂಜನೇಯಾದಿ ಪ್ರತಿಮೆಗಳಲ್ಲಿ ರಾ
ಜದೂತರಿಗೂ ಲಕ್ಷ್ಮೀಮೊದಲಾದ ಸ್ತ್ರೀ ಪ್ರತಿಮೆಗಳಲ್ಲಿ
ರಾಜಸ್ತ್ರೀಯರಿಗೂಕೃಷ್ಣಾದಿ ವಿಷ್ಣು ಪ್ರತಿಮೆಗಳಲ್ಲಿ ಗ್ರ
ಹಗಳಿಗು ಸಹ ಭಯ ವುಂಟಾಗುವದು. ॥ ೧೦ ॥

ಹೀಗೆ ದೇವತಾ ವಿಕಾರ ಗಳಾದಲ್ಲಿ ಶ್ರುತಿ ರಹಸ್ಯ

ದೇ ಃ ಸಾಂ ವಿಕಾರೇಷು ಶ್ರುತಿವೇತ್ತಾ ಪುರೋಹಿತಃ ॥ ೯ ॥

ದೇವತಾರ್ಚಾಂತುಗತ್ವಾವೈಶ್ವಾನಮಾಚ್ಛಾದ್ಯಭೂಷಯೇತ್

ಪ್ರೇ ಃಯೇಚ್ಛ ಮಹಾಭಾಗ ಗಂಧಮಾಲ್ಯಾನ್ನ ಸಂಪದಾ ॥

ಮಂದ ,ಸರ್ಕೇಣನವಿಧಿವತ್ ಉಪತಿಷ್ಠೇದನಂತರಂ ॥ ತಲ್ಲಿಂ

ಗೇ ನ ಚ ಮಂತ್ರೇಣ ಸ್ಥಾಲೀ ಪಾಕಂ ಯಥಾ ವಿಧಿ ॥ ೧೧ ॥

ಪ್ರರೆ ಧಾಜುಹುಯಾದ್ವಾಂದ್ವ್ಯೈಃ ಸಪ್ತರಾತ್ರ ಮತಂದ್ರಿತಃ ॥

ವಿಪಾ ,ಕ್ಷ್ಯ ಪ್ರೋಜ್ಯಾಮಧುರಾನ್ನ ಪಾನ್ಯೈಃ ಸದಕ್ಷಿಣಾಸಪ್ತದಿ

ನಃನಸಲಂದ್ರ ॥ ಪ್ರಾಪ್ತಿಷ್ಟನಿಷ್ಕ ಕ್ಷಿತಿಗೋಪ್ರದಾನ್ಯೈಃಸಕಾಂ

ಚನ್ಯೈಃಶಾಂತಿಮುಪೈತಿಪಾಪಂ ॥ ೧೨ ॥ ... ... ...



ಇತಿ ಶ್ರೀಮತ್ಸ್ಯಪುರಾಣೇ ಅರಣ್ಯ ವಿಕಾರೋಪಶಮನಂನಾಮ

ತ್ರಿಂಶದುತ್ತರ ದ್ವಿಶತ ತಮೋಧ್ಯಾಯಃ

ಸಂಪೂರ್ಣಃ



